# ನಿರ್ಣಯಗಳು.

## ...ಯ ಸಭೆ (೧೯೦೪) ಧಾರವಾಡ.

೧. (ಅ) ...ಶೈವ ಮತವು ನಿಗಮಾಗಮೋಪನಿಷದ್ಭಾಷ್ಯಪ್ರತಿಪಾದಿತ ...ಅನಾದಿಸಂಸಿದ್ಧವೆಂತಲೂ, ಶ್ರೀ ಬಸವೇಶ್ವರದೇವರು ಈ ಮತವನ್ನು ...ಪಡಿಸಿದವರೇ ಹೊರ್ತು ಸ್ಥಾಪಕರಲ್ಲವೆಂಬುವದು ಶಿಲಾಲೇಖಾದಿ ಪ್ರಮಾ...ಂದ ಸಿದ್ಧವಾಗುತ್ತದೆಂತಲೂ ಈ ಮಹಾ ಸಭೆಯವರು ಖಂಡಿತವಾಗಿ ...ತ್ತಾರೆ.

(ಬ) ಊರ್ಜಿತಸ್ಥಿತಿಯಲ್ಲಿದ್ದ ಈ ಮತವು ಕಾಲಾಂತರದಲ್ಲಿ ಸ್ವಮತಾ...ರ ವಿದ್ಯಾದಿ ನ್ಯೂನತೆಯಿಂದ ಗ್ಲಾನಿಯನ್ನು ಹೊಂದಿರುವುದು. ಅದನ್ನು ...ಗಲಾಡಿಸುವದಕ್ಕೆ ಮತತತ್ವ (ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತ) ಪ್ರತಿಪಾ...ದಕವಾದ ಸಣ್ಣ ಸಣ್ಣ ಬೋಧಪರ ಗ್ರಂಥಗಳನ್ನು ಕನ್ನಡ ಮರಾಠಿ ಭಾಷೆಗಳಲ್ಲಿ ಛಾಪಿಸಿ ಪ್ರಸಿದ್ಧಪಡಿಸುವದು, ಭಕ್ತಿಯೂ ಆಚಾರನಿಷ್ಠೆಯೂ, ಧರ್ಮಶ್ರದ್ಧೆಯೂ ಹುಟ್ಟುವಂತೆ ಉಪದೇಶ ಮಾಡುವದಕ್ಕೆ ಬೋಧಕರನ್ನು ನಿಯಮಿಸುವದು, ವಿದ್ಯಾಶಾಲಾಸ್ಥಾಪನ ಮುಂತಾದ ಉಪಾಯಗಳನ್ನು ಸಮಾಜದವರು ಅಗತ್ಯವಾಗಿ ಮಾಡತಕ್ಕದ್ದೆಂದು ಮಹಾ ಸಭೆಯವರು ಅಭಿಪ್ರಾಯಪಡುತ್ತಾರೆ

೨. ಎಲ್ಲ ವೀರಶೈವರೂ ...ವಾಗಿ ಶಿವದೀಕ್ಷಾ ಸಂಸ್ಕಾರವನ್ನು ಹೊಂದಬೇಕೆಂತಲೂ, ಲಿಂಗಾಂಗಿಗಳೆಲ್ಲರೂ ಲಿಂಗವನ್ನು ಧರಿಸೇ ಇರಬೇಕೆಂತಲೂ, ಲಿಂಗಾರ್ಚನೆ ಇಲ್ಲದೆ ಭುಂಜಿಸಕೂಡದೆಂತಲೂ, ತಮ್ಮ ವಿವಾಹ ಮುಂತಾದ ಕಾರ್ಯಗಳನ್ನು ಯಥಾವಿಧಿಯಾಗಿ ತಮ್ಮ ಗುರುಸ್ಥಲದ ಮಠಾಧಿಕಾರಿಗಳಿಂದಲೇ ಮಾಡಿಸಬೇಕೆಂತಲೂ, ಇದಕ್ಕೆ ವಿರುದ್ಧವಾಗಿ ಆಚರಿಸಿದರೆ ಸಮಾಜದವರು ಅವರನ್ನು ಬಹಿಷ್ಕರಿಸಬೇಕೆಂತಲೂ ಈ ಮಹಾ ಸಭೆಯವರು ಅಭಿಪ್ರಾಯಪಡುತ್ತಾರೆ.

೩. ಸಮುದ್ರ ಪ್ರಯಾಣಮಾಡುವ ಅಥವಾ ಬಿಡುವ ಸಂಬಂಗೂ ತಕ್ಕ ಗ್ರಂಥಾಧಾರಗಳು ಇನ್ನೂ ದೊರೆದಿಲ್ಲವಾದುದರಿಂದ ಸದ್ಯಃ ಇದನ್ನು ಸ್ಥ ಸ್ಥಿತವಾಗಿ ಇಟ್ಟಿದೆ.

೪. (ಅ) ಈ ಮತದ ಸಿಂಹಾಸನಾಧಿಪತಿಗಳೂ ಇವರ ಗೋತ್ರಜ ದ ಹಿರೇಮಠದವರೇ ಮೊದಲಾದ ಗುರುಸ್ಥಲದವರೂ, ಶಿಷ್ಯರಿಗೆ ದೀಕ್ಷಾ ಲಿಂಗಧಾರಣ, ವಿವಾಹ ಮುಂತಾದವುಗಳನ್ನು ವಿಧ್ಯುಕ್ತವಾಗಿ ಮಾಡಿಸಿ ತಾ ಸ್ವಧರ್ಮಾಚರಣೆಯಲ್ಲಿ ನಿರತರಾಗಿ, ಶಿಷ್ಯರಿಗೆ ಧರ್ಮಾಚರಣೆಗಳನ್ನು ಬೋ ಸಿ ಅವುಗಳಲ್ಲಿ ಅವರನ್ನು ಪ್ರವೃತ್ತರನ್ನಾಗಿಮಾಡಿ, ದುರಾಚರಣೆಗಳನ್ನು ನಿ ಸಬೇಕೆಂತಲೂ, ಹೀಗೆ ಮಾಡದವರಿಗೆ ಹಕ್ಕುಬಾಬುಗಳನ್ನು ಶಿಷ್ಯರು ಕೊಡದೆಂತಲೂ, ಗುರುಸ್ಥಲದವರ ಆಜ್ಞೆಗೆ ಮೀರಿದವನನ್ನು ತಮ್ಮೊಳ ದುಕೊಳ್ಳದಂತೆ ಸಮಾಜದವರು ನಿರ್ಬಂಧಿಸಬೇಕೆಂತಲೂ ಈ ಮಹಾಸ ವರು ಅಭಿಪ್ರಾಯಪಡುತ್ತಾರೆ.

(ಬ) ವೀರಶೈವ ಶಾಸ್ತ್ರಿಗಳು ಸ್ವಧರ್ಮ ಗ್ರಂಥಗಳನ್ನು ಪರಿ ಮಾಡುವದೂ, ಅವುಗಳ ಸಂಗತಿಯನ್ನು ಸಮಾಜದವರ ತಿಳುವಳಿಕೆಗೆ ವದೂ, ಅತ್ಯವಶ್ಯಕವಾದದ್ದೆಂದು ಮಹಾಸಭೆಯವರು ಅಭಿಪ್ರಾಯಪಡುತ್ತ

೫. ನಮ್ಮ ಸಮಾಜದವರು ವೀರಶೈವಧರ್ಮ ಪಾಠಶಾಲೆಗಳ ಮತಗ್ರಂಥಾಲಯಗಳನ್ನೂ ಸ್ಥಾಪಿಸಿ ಸ್ಥಿರವಾಗಿ ನಡೆಯಿಸಬೇಕೆಂತಲೂ ಶೈವರಿಂದ ರಚಿಸಲ್ಪಟ್ಟ ಕನ್ನಡ ಗ್ರಂಥಗಳನ್ನು ಆದಷ್ಟು ಪ್ರಸಿದ್ಧಿಪಡಿಸಬೇಕೆಂತ ಲೂ ಮಹಾಸಭೆಯವರು ಅಭಿಪ್ರಾಯಪಡುತ್ತಾರೆ.

೬. ವೀರಶೈವರು ವಿದ್ಯದಲ್ಲಿ ಹಿಂದುಳಿದಿರುವದರಿಂದ ಇವರಿಗೆ ಸರಕಾ ರದವರು ವಿದ್ಯಾರ್ಥಿವೇತನ ಮತ್ತು ಸರಕಾರೀ ಉದ್ಯೋಗಗಳನ್ನು ಕೊಟ್ಟು, ವಿದ್ಯೆಯನ್ನು ಕಲಿಯುವದಕ್ಕೆ ಉತ್ತೇಜನ ಬರುವಂತೆ ಪ್ರೋತ್ಸಾಹಿಸಬೇಕೆಂ ದು ಈ ಮಹಾಸಭೆಯ ಪರವಾಗಿ ಅಧ್ಯಕ್ಷರು ನಮ್ಮ ದಯಾಳು ಸರಕಾರದ ರಿಗೆ ವಿನಂತಿ ಮಾಡಿಕೊಳ್ಳಬೇಕೆಂದು ಮಹಾ ಸಭೆಯವರು ಅಭಿಪ್ರಾಯಪ ತ್ತಾರೆ.

೭. ವೀರಶೈವರಲ್ಲಿ ಸಿವಿಲ್ಲ ಮತ್ತು ಕ್ರಿಮಿನಲ್ಲ ವ್ಯಾಜ್ಯಗಳಲ್ಲಿ ಶಿಕ್ಷಿಸಲ್ಪ ಟ್ಟವರಾಗಿ ಕಾರಾಗೃಹವಾಸವನ್ನನುಭವಿಸುತ್ತಿರುವವರಿಗೆ ಮುಖ್ಯ ಧರ್ಮಚಿ ವಾದ ಇಷ್ಟಲಿಂಗವನ್ನು ತೆಗೆಯಿಸುತ್ತಿರುವ ಸಂಪ್ರದಾಯವನ್ನೂ ಅವರಿಗೆ ರಾಗೃಹದಲ್ಲಿ ಅನ್ನಪಾನಾದಿಗಳನ್ನು ಅನ್ಯಮತದವರಿಂದ ಕೊಡಿಸುವದನ್ನೂ

...ಂದು ಈ ಮಹಾಸಭೆಯ ಪರವಾಗಿ ಅಧ್ಯಕ್ಷರು ದಯಾಳು ಸರಕಾರದವರಿ ...ನಂತಿ ಮಾಡಿಕೊಳ್ಳಬೇಕೆಂಬುದು ಈ ಮಹಾ ಸಭೆಯವರ ಅಭಿಪ್ರಾಯವಾಗಿದೆ.

೮. ಲಿಂಗಾಯತರಿಗೆ ಮುಖ್ಯೋದ್ಯೋಗವಾಗಿರುವ ಒಕ್ಕಲತನವು ಕೀಳು ಸ್ಥಿತಿಗೆ ಬಂದಿರುವುದು. ಬೇಸಾಯದ ಸಾಮಾನುಗಳು ಹಳೇತರದವುಗಳಾಗಿರುವದರಿಂದ ಈಗಿನ ಸುಧಾರಿಸಿದ ಸಾಮಾನುಗಳನ್ನು ಸರಕಾರದವರು ತಂದು ಅವುಗಳ ಉಪಯೋಗವನ್ನು ರೈತರಿಗೆ ತೋರಿಸುವ ಸರಕಾರೀ ಕೃಷ್ಯಗಳನ್ನು ಸ್ಥಾಪಿಸುವದಾಗಿಯೂ, ಹರಿದುಹೋಗುವ ನೀರನ್ನು ಅಲ್ಲಿಂದಲ್ಲೇ ತಡೆದು ಸಣ್ಣ ಸಣ್ಣ ಕೆರೆಗಳನ್ನೂ ಕಟ್ಟೆಗಳನ್ನೂ ಕಟ್ಟಿಸಿ ಅವುಗಳಿಂದ ಸಾಧ್ಯವಾದಮಟ್ಟಿಗೆ ...ೀರನ್ನು ಬೇಸಾಯಕ್ಕನುಕೂಲಗೊಳಿಸಿ ಕೊಡುವದಕ್ಕಾಗಿಯೂ ಸಭೆಯ ಪರ...ಗಿ ಅಧ್ಯಕ್ಷರು ಸರಕಾರದವರಿಗೆ ವಿನಂತಿ ಮಾಡಿಕೊಳ್ಳಬೇಕೆಂದು ಮಹಾ...ಭೆಯವರು ಅಭಿಪ್ರಾಯಪಡುತ್ತಾರೆ.

೯. ವೀರಶೈವರು ತಮ್ಮೊಳಗಿನ ವ್ಯವಹಾರಿಕ ಮತ್ತು ಧಾರ್ಮಿಕ ವ್ಯಾ...ಗಳನ್ನು ಕೋರ್ಟುಗಳಿಗೆ ಒಯ್ಯದೆ ಆದಷ್ಟುಮಟ್ಟಿಗೆ ತಮ್ಮೊಳಗಿನ ಪಂಚ...ದಲೇ ತೀರಿಸಿಕೊಳ್ಳುವಂತೆ ಮಾಡಬೇಕೆಂದು ಮಹಾಸಭೆಯವರು ಅಭಿಪ್ರಾ...ಯಪಡುತ್ತಾರೆ.

೧೦. ನಮ್ಮ ವೀರಶೈವರು, ತಮ್ಮ ಲಗ್ನ ಮುಂತಾದ ಕಾರ್ಯಗಳಲ್ಲಿ ದೊಡ್ಡ ನಿಬ್ಬಣ ಕೂಡಿಸಿ, ನರ್ತನ ಮೊದಲಾದವುಗಳನ್ನು ಮಾಡಿಸಿ, ಹೇರಳವಾಗಿ ಮದ್ದನ್ನು ಸುಟ್ಟು ದುಂಧುಗಾರಿಕೆಯಿಂದ ಮಿತಿಯಿಲ್ಲದಷ್ಟು ಹಣವನ್ನು ವ್ಯಯಮಾಡುತ್ತಿರುವರು. ಈ ಪದ್ಧತಿಯನ್ನು ಬಿಟ್ಟು, ಮಿತವ್ಯಯದಿಂದ ವಿವಾಹಾದಿ ಕಾರ್ಯಗಳನ್ನು ಮಾಡಬೇಕೆಂದು ಮಹಾ ಸಭೆಯವರು ಅಭಿಪ್ರಾಯ ಪಡುತ್ತಾರೆ.

೧೧. ಈ ಮಹಾಸಭೆಯು ಪ್ರತಿವರ್ಷವೂ ಅವ್ಯಾಹತವಾಗಿ ನಡೆಯುವಂತೆ ಶಾಸ್ವತವಾದ ವರ್ಗಣೀದಾರರನ್ನು ಕೂಡಿಸಬೇಕೆಂದು ಮಹಾಸಭೆಯ...ರು ಅಭಿಪ್ರಾಯಪಡುತ್ತಾರೆ.

೧೨. ಸರಕಾರೀ ಕೋರ್ಟುಗಳಲ್ಲಿ ಸಮರ್ಪಕವಾದ ಆಧಾರಗಳೇನೂ ಇಲ್ಲದೆ ಲಿಂಗಾಯತರನ್ನು ಒಂದೆರಡು ಪ್ರಸಂಗಗಳಲ್ಲಿ ಶೂದ್ರರೆಂದು ತಿಳಿದು ತೀರ್ಮಾನ ಕೊಟ್ಟಿರುತ್ತಾರೆ. ಲಿಂಗಾಯಿತರು ಶೂದ್ರರಂತೆ ಸೇವಾವೃತ್ತಿ ಮಾಡದಿರುವದರಿಂದಲೂ, ಇತರರಲ್ಲಿ ಅನ್ನೋದಕ ವ್ಯವಹಾರ ಮಾಡದಿರುವದರಿಂದಲೂ, ಅಭಕ್ಷ್ಯಭಕ್ಷಣ ಅಪೇಯಪಾನ ಮಾಡದಿರುವದರಿಂದಲೂ ಶ್ರೇಷ್ಠವರ್ಣ

ದವರಾಗಿ ವಂದ್ಯರೆನಿಸಿಕೊಂಡಿರುವದರಿಂದಲೂ, ಇವರ ಗುರುಗಳು ಯಾರಿಗೂ ಅಧೀನರಾಗಿರದೆ ಅಡ್ಡಪಲ್ಲಕ್ಕಿ ಶ್ವೇತಛತ್ರ ಪಂಚದೀವಟಿಗೆ ಮೊದಲಾದ ಶ್ರೇಷ್ಠ ಬಿರುದಾವಳಿಗಳುಳ್ಳವರಾಗಿರುವದರಿಂದಲೂ ಇವರು ಅತ್ಯುತ್ತಮ ವರ್ಗದವರೆಂದು ಸಿದ್ಧವಾಗುತ್ತದೆಂಬ ಬಗ್ಗೆ ಈ ಮಹಾಸಭೆಯ ಪರವಾಗಿ ಅಧ್ಯಕ್ಷರು ಸರಕಾರದವರ ಕೂಡ ಪತ್ರವ್ಯವಹಾರ ನಡಿಸಿ, ಅಥವಾ ಇತರ ರೀತಿಯಿಂದ ಸ್ಥಾಪಿಸಿ ಕೊಡಬೇಕೆಂದು ಮಹಾಸಭೆಯವರು ಅಭಿಪ್ರಾಯಪಡುತ್ತಾರೆ.

## ೨ನೆಯ ಸಭೆ [೧೯೦೫] ಬೆಂಗಳೂರು.

೧. ಶ್ರೀಮದ್ವೀರಶೈವ ಮಹಾಸಭೆಯು ವರ್ಷ ವರ್ಷ ನಿರ್ವಿಘ್ನವಾಗಿ ನಡೆದುಕೊಂಡು ಹೋಗುವಂತೆ ಮಾಡುವದಕ್ಕಾಗಿ ವರ್ಷ ೧ಕ್ಕೆ ೫ ರೂಪಾಯಿಗಳ ಮೇರೆ ವಾರ್ಷಿಕ ವೇತನವನ್ನು ಜನ್ಮಾವಧಿ ಕೊಡತಕ್ಕ ವೀರಶೈವರನ್ನು ಆಜೀವ ಸಭಾಸದರನ್ನಾಗಿ ಮಾಡಬೇಕೆಂತಲೂ, ಧಾರವಾಡದಲ್ಲಿ ೧ ಸ್ಟ್ಯಾಂಡಿಂಗ ಕಮಿಟಿಯನ್ನು ಸ್ಥಾಪಿಸಬೇಕೆಂತಲೂ ಮಹಾಸಭೆಯವರು ನಿರ್ಧರಿಸಿರುತ್ತಾರೆ.

೨. ವೀರಶೈವ ಮತಸಂಬಂಧವಾದ ಗ್ರಂಥಗಳನ್ನು ಪ್ರಚಾರಕ್ಕೆ ತರಲು ತಕ್ಕ ಏರ್ಪಾಟನ್ನು ಮಾಡಬೇಕೆಂತಲೂ ವೀರಶೈವ ಮಂಡಲಿಯವರಿಂದಲೇ ಪ್ರಕಟಿಸಲ್ಪಡುವ ವರ್ತಮಾನಪತ್ರಿಕೆಗಳಿಗೆ ಮಹಾಸಭೆಯಿಂದ ಪ್ರೋತ್ಸಾಹವನ್ನು ಕಲ್ಪಿಸಿಕೊಡಬೇಕೆಂತಲೂ ಮಹಾ ಸಭೆಯವರು ನಿರ್ಧರಿಸಿರುತ್ತಾರೆ.

೩. ಮೈಸೂರ ವೀರಶೈವ ಜನಾಂಗದಲ್ಲಿ ವಿದ್ಯಾಭಿವೃದ್ಧಿಯನ್ನು ಮಾಡಿಸಲು ಸಹಾಯಗೊಳಿಸುವದಕ್ಕಾಗಿ ಒಂದು ಧನರಾಶಿಯನ್ನು ಸೇರಿಸಬೇಕೆಂತಲೂ, ಅದಕ್ಕೆ "ಮೈಸೂರ ಲಿಂಗಾಯತ ಎಜ್ಯುಕೇಶನ್ ಫಂಡು" ಎಂದು ಹೆಸರಿಡಲ್ಪಡಬೇಕೆಂತಲೂ ಮಹಾಸಭೆಯವರು ಗೊತ್ತುಮಾಡಿರುತ್ತಾರೆ.

೪. ಮೈಸೂರ ಸೀಮೆಯ ವೀರಶೈವ ಮತದ ಇಂಗ್ಲೀಯ ವಿದ್ಯಾರ್ಥಿಗಳಿಗಾಗಿ ಒಂದು "Students home" (ವಿದ್ಯಾರ್ಥಿ ನಿಲಯ) ವನ್ನು ಬೆಂಗಳೂರಿನಲ್ಲಿ ಕಟ್ಟಿಸಬೇಕೆಂದು ಮಹಾಸಭೆಯವರು ತೀರ್ಮಾನಿಸಿರುತ್ತಾರೆ.

೫. ವೀರಶೈವರಲ್ಲಿ ಸಂಸ್ಕೃತ ವಿದ್ಯಾಭ್ಯಾಸವನ್ನು ಹೆಚ್ಚಿಸುವದಕ್ಕಾಗಿ ಮುಖ್ಯ ಮುಖ್ಯ ಪಟ್ಟಣಗಳಲ್ಲಿ ಸಂಸ್ಕೃತ ಪಾಠಶಾಲೆಗಳನ್ನು ಸ್ಥಾಪಿಸಬೇಕೆಂದು ಮಹಾಸಭೆಯವರು ಅಭಿಪ್ರಾಯಪಡುತ್ತಾರೆ.

೬. ವೀರಶೈವ ಮತಚರಿತ್ರೆಯೊಂದನ್ನು ಬರೆಸುವದಕ್ಕೆ ಪ್ರಯತ್ನಿಸಬೇಕೆಂದು ಮಹಾಸಭೆಯವರು ನಿಷ್ಕರ್ಷೆ ಮಾಡಿರುತ್ತಾರೆ.

೭. ಮಹಾಸಭೆಯವರು ವೀರಶೈವ ವಿದ್ಯಾಭಿವೃದ್ಧಿಗಾಗಿ ಧನರಾಶಿಯನ್ನು ಕೂಡಿಸುವ ವಿಷಯದಲ್ಲಿಯೂ ಮತಸಂಬಂಧವಾದ ಕಾರ್ಯಗಳಲ್ಲಿ ಮಹಾಸಭೆಯವರು ಮಾಡುವ ಪರಿಷ್ಕರಣಗಳ ವಿಷಯದಲ್ಲಿಯೂ ಸಿಂಹಾಸನಾಧಿಪತಿಗಳ ಮತ್ತು ಪ್ರಮುಖ ಮಠಾಧಿಕಾರಿಗಳ ಸಹಪ್ರವೃತ್ತಿ ಮತ್ತು ಪ್ರೋತ್ಸಾಹವನ್ನು ಪಡೆಯುವದಕ್ಕಾಗಿ ಆ ಅಧಿಕಾರ ಮಠಸ್ಥರುಗಳಿಗೆ ಮಹಾಸಭೆಯಿಂದ ಬಿನ್ನಹವನ್ನು ಮಾಡಿಕೊಳ್ಳಬೇಕೆಂದು ಈ ಮಹಾಸಭೆಯವರು ನಿರ್ಧರಿಸಿರುತ್ತಾರೆ.

೮. ವೀರಶೈವ ಮತಗ್ರಂಥಗಳಲ್ಲಿ ವರ್ಷಕ್ಕೊಂದು ಪರೀಕ್ಷೆಯನ್ನು ಸಾಧ್ಯವಾದಮಟ್ಟಿಗೆ ಏರ್ಪಡಿಸಬೇಕೆಂದು ಮಹಾಸಭೆಯವರು ನಿಷ್ಕರ್ಷಿಸಿರುತ್ತಾರೆ.

೯. ಮುಖ್ಯ ಸಿಂಹಾಸನಾಧಿಕಾರಸ್ಥಾನಗಳೂ ಮತ್ತು ಶಾಖಾಮಠಾಧಿಕಾರಸ್ಥಾನಗಳಿಗೆ ವಿದ್ಯಾ, ಕುಲ, ಶೀಲಾಧಿಗಳಲ್ಲಿ ಯೋಗ್ಯತಾಸಂಪನ್ನರಾದವರನ್ನೇ ಉತ್ತರಾಧಿಕಾರಿಗಳನ್ನಾಗಿ ಆರಿಸುವ ವಿಷಯದಲ್ಲಿ ಆಯಾಯ ಮಠದಪೂರ್ವಾಧಿಕಾರಿಗಳೂ ಆಯಾಸ್ಥಲದ ವೀರಶೈವ ಮಹಾಜನಗಳೂ ಪ್ರಯತ್ನಿಸಬೇಕೆಂದು ಮಹಾಸಭೆಯವರು ತೀರ್ಮಾನಿಸಿರುತ್ತಾರೆ.

೧೦. ಸಿಂಹಾಸನಾಧಿಪತಿಗಳ ಅಪ್ಪಣೆಯನ್ನು ಪಡೆದು ಸ್ಟ್ಯಾಂಡಿಂಗ ಕಮೀಟಿಯವರು ನಿರ್ಧರಿಸುವ ಕ್ಲಪ್ತವಾದಷ್ಟು ಹಣವನ್ನು ವಿದ್ಯಾಭಿವೃದ್ಧಿ ಫಂಡಿಗಾಗಿ ಪ್ರತಿಯೊಂದು ವಿವಾಹಕಾರ್ಯ ಸಮಯದಲ್ಲಿಯೂ ವೀರಶೈವರು ಕೊಡಬೇಕೆಂದು ಮಹಾಸಭೆಯವರು ಅಭಿಪ್ರಾಯಪಟ್ಟಿರುತ್ತಾರೆ.

೧೧. ಧಾರವಾಡದಲ್ಲಿ ಕಳೆದ ವರ್ಷ ನಡೆದ ಮಹಾಸಭೆಯ ಪ್ರಾರ್ಥನೆಯ ಮೇಲೆ ಮುಂಬಯಿ ಸರಕಾರದವರು ಅಲ್ಲಿನ ಕಾರಾಗೃಹಗಳಲ್ಲಿರುವ ವೀರಶೈವ ಮತದ ಬಂದಿಗಳ ದೇಹದ ಮೇಲಿನ ಲಿಂಗವನ್ನು ತೆಗೆಯಿಸಬಾರದೆಂದು ಅಪ್ಪಣೆ ಮಾಡಿರುವದಕ್ಕಾಗಿ ಆ ಸರಕಾರಕ್ಕೆ ಮಹಾಸಭೆಯವರು ವಂದನೆಯನ್ನರ್ಪಿಸಬೇಕೆಂದು ನಿರ್ಧರ ಮಾಡಿರುತ್ತಾರೆ.

೧೨. ಈ ಮಹಾಸಭೆಯು ಈ ವರ್ಷ ಬೆಂಗಳೂರಿನಲ್ಲಿ ಸೇರುವ ವಿಷಯದಲ್ಲಿ ಶ್ರೀಮನ್ಮಹಾರಾಜರವರು ಅಪ್ಪಣೆಯನ್ನು ಕೊಡಿಸಿದ್ದಕ್ಕಾಗಿ ಈ ಮಹಾಸಭೆಯವರು ಕೃತಜ್ಞತೆಯನ್ನು ತೋರ್ಪಡಿಸುತ್ತಾರಲ್ಲದೆ, ಈ ತೀರ್ಮಾನದ ಒಂದು ಪ್ರತಿಯನ್ನು ಶ್ರೀಮನ್ಮಹಾರಾಜ ಸರಕಾರದವರ ಅವಗಾಹನೆಗಾಗಿ ಕಳುಹಿಸಿಕೊಡಬೇಕೆಂದು ತೀರ್ಮಾನಿಸಿರುತ್ತಾರೆ.

## ೩ನೆಯ ಸಭೆ (೧೯೦೭) ಕೊಲ್ಹಾಪೂರ.

೧. ವೀರಶೈವ ಮಹಾಸಭೆಯ ಕಾರ್ಯವು ನಿರ್ವಿಘ್ನತೆಯಿಂದ ಸಾಗಬೇಕಾದರೆ ಒಂದು ಸ್ಥಿರವಾದ ಕಾರ್ಯನಿರ್ವಾಹಕ ಸಂಸ್ಥೆಯು ಇರುವದು ಅವಶ್ಯಕವಾದುದರಿಂದ ಆದಕ್ಕೆ (೧) ಮೈಸೂರು (೨) ದಕ್ಷಿಣ ಮಹಾರಾಷ್ಟ್ರ (೩) ಕೊಲ್ಹಾಪೂರ ಮತ್ತು ದಕ್ಷಿಣ ಮಹಾರಾಷ್ಟ್ರದ ಸಂಸ್ಥಾನಗಳು (೪) ಮದ್ರಾಸ ಇಲಾಖೆ (೫) ಮಹಾರಾಷ್ಟ್ರ, ಬಿರಾರ ಮಧ್ಯಪ್ರಾಂತ ಸಹಿತ (೬) ನಿಜಾಮನರಾಜ್ಯ ಹೀಗೆ ಆರು ಭಾಗಗಳಿಂದ ಅನುಕ್ರಮವಾಗಿ ಆರಿಸಲ್ಪಟ್ಟ ೫, ೫, ೩, ೩, ೬ ಮತ್ತು ೨ ಈ ಪ್ರಕಾರ ೨೪ ಮಂದಿ ಸಭಾಸದರು ಒಬ್ಬರು ಚೇಅರಮನ್ನರು ಕೂಡಿ ೨೫ ಮಂದಿಯುಳ್ಳ ಒಂದು ಸ್ಟ್ಯಾಂಡಿಂಗ ಕಮೀಟಿಯು ಧಾರವಾಡದಲ್ಲಿ ಸ್ಥಾಪಿಸಲ್ಪಡಬೇಕೆಂತಲೂ, ಇದಕ್ಕೆ ಈ ಸಭಾಸದರೊಳಗೇ ಮೂವರು ಸೆಕ್ರೆಟರಿಗಳು ಇರಬೇಕೆಂತಲೂ ಮಹಾಸಭೆಗಳಲ್ಲಿ ಗೊತ್ತಾದ ನಿರ್ಬಂಧನೆಗಳನ್ನು ಅನುಷ್ಠಾನದಲ್ಲಿ ತರುವದು, ಪ್ರತಿವರ್ಷವು ಒಂದೊಂದು ಸ್ಥಳದಲ್ಲಿ ಮಹಾಸಭೆಯು ಕೂಡುವಂತೆ ಏರ್ಪಾಟು ಮಾಡುವದು, ಚರ್ಚಿಸಲ್ಪಡಬೇಕಾದ ವಿಷಯಗಳನ್ನೂ ಅಧ್ಯಕ್ಷರನ್ನೂ ನಿಯಮಿಸುವದು ಮೊದಲಾದವುಗಳು ಈ ಸಂಘದ ಕರ್ತವ್ಯಗಳಾಗಿರಬೇಕೆಂತಲೂ ಪ್ರತಿಯೊಂದು ಪ್ರಾಂತದ ಸಭಾಸದರಿಗೆ ತಮ್ಮ ಸಹಾಯಕ್ಕೋಸ್ಕರ ಸ್ಥಾನಿಕ ಸಂಘಗಳನ್ನು ಸ್ಥಾಪಿಸಿಕೊಳ್ಳುವ ಅಧಿಕಾರವುಂಟೆಂತಲೂ ಪ್ರತಿವರ್ಷವೂ ಕೂಡುವ ಮಹಾಸಭೆಗೆ ವೆಚ್ಚವಾಗಿ ಉಳಿದ ಹಣದೊಳಗಿನ ಅರ್ಧಭಾಗವನ್ನು ಈ ಸ್ಥಿರಕಾರ್ಯನಿರ್ವಾಹಕ ಸಂಘದವರ ಜನರಲ್ಲ ಫಂಡಿಗೆ ಸೇರಿಸಬೇಕೆಂತಲೂ ಈ ಫಂಡಿನ ಆದಾಯವನ್ನೂ ಈ ಸಂಘದವರು ಮಾಡಿದ ಕಾರ್ಯಗಳ ವರದಿಯನ್ನೂ ಸೆಕ್ರೆಟರಿಗಳು ಮಹಾಸಭೆಯಲ್ಲಿ ಒಪ್ಪಿಸಬೇಕೆಂತಲೂ ಮಹಾಸಭೆಯವರು ನಿರ್ಣಯಿಸಿರುತ್ತಾರೆ.

೨. ನಮ್ಮ ಸಮಾಜದ ಇತಿಹಾಸಗಳನ್ನು ಬರೆಯಿಸುವದು, ಧರ್ಮಪ್ರಸಾರವನ್ನು ಮಾಡಿಸುವದು, ಧಾರ್ಮಿಕವಾದ ಇತರ ಯತ್ನಗಳನ್ನು ಮಾಡುವದು, ಅನಾಥ ರಕ್ಷಣೆಯ ಕಾರ್ಯಸ್ಥಾಪನ ಇತ್ಯಾದಿಗಳೆಲ್ಲ ಅವಶ್ಯಕವಾಗಿ ಮಾಡಲ್ಪಡಬೇಕೆಂದು ಮಹಾಸಭೆಯವರು ಅಭಿಪ್ರಾಯಪಡುತ್ತಾರೆ. ಈ ಕಾರ್ಯವನ್ನು ಸಾಧಿಸುವದಕ್ಕೆ ಒಂದು ಧಾರ್ಮಿಕ ಫಂಡು ಅವಶ್ಯಕವಾಗಿರುವದರಿಂದ ಇದನ್ನು ಸಾರ್ವತ್ರಿಕವಾಗಿ ಸ್ಥಾಪಿಸುವದಕ್ಕೆ ಈ ದಿನದಿಂದಲೂ ಆರಂಭಿಸಬೇಕೆಂತಲೂ ಸಾಕಾದಷ್ಟು ಹಣವು ಅದರಲ್ಲಿ ಕೂಡಿದ ಕೂಡಲೇ ಬೇಕಾದ ಕಾರ್ಯವನ್ನಾರಂಭಿಸಬೇಕೆಂತಲೂ ಮಹಾಸಭೆಯವರು ಠರಾಯಿಸಿರುವರು.

೩. ಚಿಕ್ಕಪ್ರಾಯದಲ್ಲಿ ಲಗ್ನ ಮಾಡುವದು ಸಮಾಜಕ್ಕೆ ಅಹಿತಕರವಾದುದರಿಂದ ಅದನ್ನು ಕೂಡಲೇ ನಿಲ್ಲಿಸಿ ಪ್ರೌಢ ವಿವಾಹವನ್ನು ರೂಢಿಯಲ್ಲಿ ತರುವದು ಅತ್ಯವಶ್ಯವಿರುವದರಿಂದ ಇದಕ್ಕೆ ಮಠಾಧಿಕಾರಿಗಳು ಲಕ್ಷಕೊಡಬೇಕೆಂದು ಈ ಮಹಾಸಭೆಯ ಅಭಿಪ್ರಾಯವಿದೆ.

೪. ವೀರಶೈವರು ಲಗ್ನ, ಪುರಾಣ ಪುಣ್ಯಕಥೆಗಳಲ್ಲಿ ದುಂದುಗಾರಿಕೆಯಿಂದ ಮಿತವಿಲ್ಲದಷ್ಟು ಹಣವನ್ನು ವ್ಯಯ ಮಾಡುವದರಿಂದಲೂ ವ್ಯವಹಾರಿಕ ಮತ್ತು ಧಾರ್ಮಿಕ ವ್ಯಾಜ್ಯಗಳನ್ನು ಕೋರ್ಟಿಗೆ ವೈದು ಮಿತಿಮೀರಿ ಹಣವನ್ನು ವೆಚ್ಚ ಮಾಡುವದರಿಂದಲೂ ಸಮಾಜಕ್ಕೆ ವಿಶೇಷ ಹಾನಿವುಂಟಾಗುವ ಕಾರಣ ಅವನ್ನು ನಿಲ್ಲಿಸಬೇಕೆಂದು ಈ ಸಭೆಯವರು ಅಭಿಪ್ರಾಯಪಡುತ್ತಾರೆ.

೫. ನಮ್ಮ ಸಮಾಜದವರು ವಾಸಿಸುವ ಕೆಲವು ಭಾಗಗಳಲ್ಲಿ ಕೆಲವರೊಳಗೆ ಉಡಿಕಿ ಅಥವಾ ಕೊಡಿಕೆ ಎಂಬ ಪದ್ಧತಿಯು ಮಿತಿಮೀರಿಹೋಗಿರುತ್ತದೆ. ಇದನ್ನು ಮಿತಗೊಳಿಸುವದಕ್ಕಾಗಿ ೨೫ ವರ್ಷದೊಳಗಿನ ವಿಧವೆಯರು ಮಾತ್ರ ಮಕ್ಕಳಿಲ್ಲದ ಸಂದರ್ಭದಲ್ಲಿ ಮತ್ತೊಮ್ಮೆ ಮಾತ್ರ ಶಾಸ್ತ್ರೀಯವಾಗಿ ವಿಧವಾವಿವಾಹವನ್ನು ಅವರು ಮಾಡಿಕೊಳ್ಳಬಹುದೆಂದು ಮಹಾಸಭೆಯವರು ಅಭಿಪ್ರಾಯಪಡುತ್ತಾರೆ.

೬. ಸ್ತ್ರೀಯರಿಗೆ ಶಿಕ್ಷಣವನ್ನು ಕೊಡುವದು ಸಂಸಾರ ಸೌಖ್ಯವನ್ನು ಹೆಚ್ಚಿಸುವದಕ್ಕೆ ದೊಡ್ಡ ಸಾಧನವಾಗಿರುವದರಿಂದ ಸ್ತ್ರೀಶಿಕ್ಷಣಕ್ಕೆ ಸಮಾಜದವರು ಆದಷ್ಟು ಉತ್ತೇಜನ ಕೊಡಬೇಕೆಂದು ಈ ಸಭೆಯವರ ಅಭಿಪ್ರಾಯವದೆ.

೭. ಲಿಂಗಾಯತರಿಗೆ ಮುಖ್ಯೋದ್ಯೋಗಗಳಾಗಿರುವ ವ್ಯಾಪಾರ, ಒಕ್ಕಲತನ, ಕೈಗಾರಿಕೆಗಳು ಕೀಳು ಸ್ಥಿತಿಗೆ ಬಂದಿರುವದರಿಂದ ಈಗಿನ ಕಾಲದಲ್ಲಿ ರೂಢಿಯಲ್ಲಿರುವ ವಿಶೇಷ ಸಾಧನಗಳ ಉಪಯೋಗದಿಂದ ಈ ತಮ್ಮ ಉದ್ಯೋಗಗಳನ್ನು ನಮ್ಮ ಯಾವತ್ತು ಸಮಾಜದವರು ಊರ್ಜಿತ ಸ್ಥಿತಿಗೆ ತಂದುಕೊಳ್ಳಬೇಕೆಂದು ಹಿಂದಿನ ಸಭೆಗಳಲ್ಲಿ ಮಾಡಿದ ನಿರ್ಣಯಗಳನ್ನು ಈ ಸಭೆಯವರು ಪುನಃ ಸಮಾಜದವರ ಗಮನಕ್ಕೆ ತರುತ್ತಾರೆ.

೮. ನಮ್ಮ ಸಮಾಜದ ಜಂಗಮರಲ್ಲಿ ಸಂಸ್ಕೃತ ವಿದ್ಯೆಯ ವಿಶೇಷವಾಗಿ ವೈದಿಕ ವಿದ್ಯೆಯ ಪ್ರಸಾರವು ಅವಶ್ಯವಾಗಿ ಆಗಬೇಕೆಂತಲೂ, ಅನಾಥ ವಿದ್ಯಾರ್ಥಿಗಳ ಶಿಕ್ಷಣದ ಸಲುವಾಗಿ ಅಲ್ಲಲ್ಲಿಗೆ ಫಂಡುಗಳನ್ನು ಸ್ಥಾಪಿಸಬೇಕೆಂತಲೂ, ನಮ್ಮ ಸಮಾಜದ ಯಾವತ್ತೂ ಬಾಲಕರಿಗೆ ಪ್ರಾಥಮಿಕ ಶಿಕ್ಷಣವನ್ನು ಅಗತ್ಯವಾಗಿ ಕೊಡಬೇಕೆಂತಲೂ ಈ ಸಭೆಯವರ ಅಭಿಪ್ರಾಯವಿದೆ.

## ೪ನೆಯ ಸಭೆ (೧೯೦೮)—ಬಾಗಲಕೋಟೆ.

೧. ಹಿಂದುಸ್ಥಾನದೊಳಗಿನ ಯಾವತ್ತು ವೀರಶೈವ ಸಮಾಜದವರ ಪತಿಯಿಂದ ಈ ವೀರಶೈವ ಮಹಾಸಭೆಯವರು ಬ್ರಿಟಿಶ ಸರಕಾರಕ್ಕೆ ತಮ್ಮ ರಾಜನಿಷ್ಠೆಯನ್ನೂ ಕೃತಜ್ಞತೆಯನ್ನೂ ವ್ಯಕ್ತಪಡಿಸುವದಲ್ಲದೆ, ಹಿಂದುಸ್ಥಾನದಲ್ಲಿ ಕೆಲ ಅನ್ಯಮತಿಯವರಾದ ಅಸಂತುಷ್ಟ ಜನರು ಆರಂಭಿಸಿರುವ ರಾಜದ್ರೋಹಿಯೂ ಮತ್ತೂ ಅರಾಜಕವೂ ಆದ ಚಳವಳಿಗಳನ್ನು ಅನುಮತಿಸಿರುತ್ತಾರೆ. ( ಈ ಬಗ್ಗೆ ಹಿಂದುಸ್ಥಾನ ಸರಕಾರಕ್ಕೂ ಮುಂಬಯಿ ಸರಕಾರಕ್ಕೂ ತಂತಿಗಳು ಕಳುಹಿಸಲ್ಪಟ್ಟವು. )

೨. ಮುಂಬಯಿ ಸರಕಾರ, ಕೊಲಾಪೂರ ಸರಕಾರ, ಮೈಸೂರ ಸರಕಾರ ಮತ್ತೂ ಹೈದರಾಬಾದ ಸರಕಾರ ಈ ನಾಲ್ಕು ಸರಕಾರದವರ ಬಗ್ಗೆ ಹಿಂದುಸ್ಥಾನದ ಯಾವತ್ತೂ ವೀರಶೈವ ಸಮಾಜದವರ ಪತಿಯಿಂದ ಈ ಮಹಾಸಭೆಯವರು ತಮ್ಮ ಪ್ರೀತಿವಿಶ್ವಾಸ ಗೌರವಗಳನ್ನೂ ರಾಜನಿಷ್ಠೆಯನ್ನೂ ಪ್ರದರ್ಶಿಸುವದಲ್ಲದೆ ವೀರಶೈವರ ವಿದ್ಯಾಭಿವೃದ್ಧಿಗಾಗಿ ಮತ್ತೂ ಉತ್ಕರ್ಷಕ್ಕಾಗಿ ಆಯಾಯ ಸರಕಾರದವರು ಸಹಾಯಮಾಡಬೇಕೆಂದು ಮಹಾಸಭೆಯವರು ವಿನಂತಿ ಮಾಡಿಕೊಳ್ಳುತ್ತಾರೆ. [ಈ ಬಗ್ಗೆ ಆಯಾಯ ಸರಕಾರದವರಿಗೆ ತಂತಿಗಳು ಕಳಿಸಲ್ಪಟ್ಟವು.]

೩ ಮುಂಬಯಿ ಇಲಾಖೆಯ ಲೋಕಪ್ರಿಯ ಗವ್ಹರ್ನರರಾದ ಸರ್ ಕ್ಲಾರ್ಕ ಇವರ ಪತ್ನಿಯಾದ ಲೇಡಿ ಕ್ಲಾರ್ಕ ಇವರ ಅಕಾಲಿಕ ಮರಣದಿಂದ ಹಿಂದುಸ್ಥಾನದ ಯಾವತ್ತು ವೀರಶೈವ ಸಮಾಜದವರಿಗೆ ಬಹಳ ದುಃಖ ಉಂಟಾಗಿರುವದರಿಂದ ಅವರೆಲ್ಲರ ಪತಿಯಿಂದ ಮಹಾಸಭೆಯವರು ತಮ್ಮ ದುಃಖಪ್ರದರ್ಶನ ಮಾಡುತ್ತಾರೆ ( ಈ ಬಗ್ಗೆ ಮುಂಬಯಿ ಗವ್ಹರ್ನರ ಸಾಹೇಬರಿಗೆ ದುಃಖ ಪ್ರದರ್ಶನದ ತಂತಿಯು ಕಳಿಸಲ್ಪಟ್ಟಿತು. )

೪ ಶ್ರೀ ಜಗದ್ಗುರು ಚಿತ್ರಕಲ್‌ದುರ್ಗ ಸಂಸ್ಥಾನದ ಮಹಾಸ್ವಾಮಿಗಳವರಿಗೆ ಬಹುಕಾಲದಿಂದ ನಡೆಯುತ್ತ ಬಂದಿರುವ ಅಡ್ಡಪಲ್ಲಕ್ಕಿ ಮತ್ತು ಪಂಚಕಳಸವೆಂಬೆರಡು ಮಹತ್ತರವಾದ ಮತ್ತೂ ಮರ್ಯಾದೆಯುಳ್ಳ ಹಕ್ಕುಗಳನ್ನು ಮೈಸೂರ ಸಕಾರದವರು ಸನ್ ೧೯೦೭ನೇ ಮೇ ಮತ್ತು ಸನ್ ೧೯೦೮ ನೇ ಮೇ ತಿಂಗಳಲ್ಲಿ ಮಾಡಿದ ಠರಾವುಗಳ ಮೂಲಕ ಪ್ರತಿಬಂಧ ಪಡಿಸಿದ್ದರಿಂದ ಅವುಗಳನ್ನು ತಿರುಗಿ ಪಡೆದುಕೊಳ್ಳಲು ತತ್ಕಾಲೋಚನೆಯನ್ನು ಮಾಡಿ, ಉಚಿತವಾದ ಕಾರ್ಯವನ್ನು ನಡಿಸುವ ಬಗ್ಗೆ ಸರ್ ದೇಸಾಯಿ ಒಂಟಮುರಿಯವರ ಅಧ್ಯಕ್ಷತೆಯಲ್ಲಿ ಒಂದು ಸಂಘವು ಏರ್ಪಡಿಸಲ್ಪಡಬೇಕೆಂದು ಮಹಾಸಭೆಯವರು ನಿರ್ಣಯ ಮಾಡುತ್ತಾರೆ.

೫. ವೀರಶೈವಕ್ಕೆ ಸಮಾಜದಲ್ಲಿ ಸದ್ಯಃ ದುರ್ದೈವದಿಂದ ಧರ್ಮಗ್ಲಾನಿ ಯುಂಟಾಗಿರುತ್ತಿದ್ದು, ಅದನ್ನು ಹೋಗಲಾಡಿಸುವದಕ್ಕೂ, ಶೂನ್ಯ ಸಿಂಹಾಸನಾಧ್ಯಕ್ಷರು, ಪಟ್ಟದ ದೇವರು, ಚರಮೂರ್ತಿಗಳು ಮೊದಲಾದ ಪೂಜ್ಯರಾದ ಸ್ವಾಮಿಗಳಿಗೆ ಯೋಗ್ಯವಾದ ಶಿಕ್ಷಣವನ್ನು ಕೊಟ್ಟು, ಅವರಿಂದ ಸಮಾಜದಲ್ಲಿ ಭಕ್ತ ಮಾಹೇಶ್ವರರಿಬ್ಬರಿಗೂ ಶಿವಾನುಭವಶಾಸ್ತ್ರಜ್ಞಾನವನ್ನು ಪ್ರಸಾರಗೊಳಿಸಲಿಕ್ಕೂ ಶ್ರೀ ಶಿವಯೋಗಮಂದಿರವನ್ನು ಸ್ಥಾಪಿಸತಕ್ಕದೆಂದು ಮಹಾಸಭೆಯವರು ನಿರ್ಣಯ ಮಾಡುತ್ತಾರೆ.

೬. ಶಿಕ್ಷಣ ಪ್ರಸಾರದಿಂದ ನಮ್ಮ ಸಮಾಜಕ್ಕೆ ಐಹಿಕ ಪಾರಮಾರ್ಥಿಕ ಲಾಭಗಳೆರಡೂ ಆಗುತ್ತಿದ್ದು, ಶಿಕ್ಷಣವಿಲ್ಲದೆ ಸಮಾಜದ ಉನ್ನತಿಯು ಎಂದಿಗೂ ಆಗಲಾರದೆಂತಲೂ, ಅದಕ್ಕಾಗಿ ಅಲ್ಲಲ್ಲಿ ದೇಶೀಯ ಮತ್ತು ಆಂಗ್ಲೀಯ ಶಾಲೆಗಳಲ್ಲಿ ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೆ ವಿದ್ಯಾರ್ಥಿವೇತನ ಮತ್ತು ವಾಸಸ್ಥಲ ಈ ಎರಡರ ಅನುಕೂಲತೆಗಳನ್ನು ಕಲ್ಪಿಸಿಕೊಟ್ಟು ಅಲ್ಲಲ್ಲಿ ಪುಸ್ತಕ ಭಾಂಡಾಗಾರಗಳನ್ನೂ ಸಂಸ್ಕೃತ ಪಾಠಶಾಲೆಗಳನ್ನೂ ಸ್ಥಾಪಿಸುವುದು, ಉಪದೇಶಕರಿಂದ ಧಾರ್ಮಿಕ ಉಪನ್ಯಾಸಗಳನ್ನು ಮಾಡಿಸುವದು, ವರ್ತಮಾನಪತ್ರಗಳನ್ನು ನಡಿಸುವದು ಮೊದಲಾದ ಪ್ರಯತ್ನಗಳನ್ನು ನಡಿಸತಕ್ಕದೆಂತಲೂ ಮಹಾಸಭೆಯವರು ನಿರ್ಣಯ ಮಾಡುತ್ತಾರೆ.

೭. ಮುಂಬಯಿ ಸರಕಾರದವರು ಶ್ರೀಮಂತ ಲಖಮಗೌಡಾ ಬಸವಪ್ರಭು ಸರ್ ದೇಸಾಯಿ ಸಂಸ್ಥಾನ ಒಂಟಮುರಿ ಇವರನ್ನು ತಮ್ಮ ನಿಯಮ ನಿರ್ಮಾಣ ಸಭಾಸದರನ್ನಾಗಿಯೂ, ಮ|| ರಾ. ರಾ. ವೀರಭದ್ರಪ್ಪ ಬಸಪ್ಪ ಹಾಲಭಾವಿ, ಬಿ. ಎ. ಎಲೆಲ್. ಬಿ. ಇವರನ್ನು ಸಬ್‌ಜಜ್ಜರನ್ನಾಗಿಯೂ, ಶಿ|| ರಾ. ರಾ. ಗುರಶಿದ್ದಯ್ಯಾ ಅಡವಯ್ಯಾ ಹಿರೇಮಠ ಮಂಡಿಹಾಳ ಎಲ್. ಎಜಿ. ಇವರನ್ನು ಪ್ರಾವಿನ್ಸಿಯಲ್ ಸರ್ವೀಸಿನಲ್ಲಿಯೂ ಸೇರಿಸಿಕೊಂಡದ್ದಕ್ಕಾಗಿ ಮಹಾಸಭೆಯವರು ಮುಂಬಯಿ ಸರಕಾರದವರಿಗೆ ಬಹಳ ಕೃತಜ್ಞತೆಯುಳ್ಳವರಾಗಿರುತ್ತಾರೆ. ಇದರಂತೆ ಕೊಲ್ಹಾಪೂರ ಸರಕಾರದವರು ವೀರಶೈವ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸುವದಕ್ಕಾಗಿ ಹೆಚ್ಚು ಬೆಲೆಯುಳ್ಳ ಕಟ್ಟಡವನ್ನು ಬಹುಭಾಗ ಧರ್ಮಾರ್ಥವಾಗಿ ಕೊಟ್ಟದ್ದಲ್ಲದೆ ಮ|| ರಾ|| ರಾ|| ಚೌಘುಳೆ, ಬಿ. ಎ., ಎಲೆಲ್. ಬಿ., ಇವರನ್ನು ಸಬ್‌ಜಜ್ಜರನ್ನಾಗಿ ನೇಮಿಸಿಕೊಂಡದ್ದಕ್ಕಾಗಿ, ಮಹಾಸಭೆಯವರು ಕೊಲ್ಹಾಪೂರ ಸರಕಾರದವರಿಗೆ ಕೃತಜ್ಞತೆಯುಳ್ಳವರಾಗಿರುತ್ತಾರೆ. ಇದರಂತೆ ಮೈಸೂರ, ಹೈದ್ರಾಬಾದ ಮತ್ತೂ ಮದ್ರಾಸ ಸರಕಾರದವರು ನಮ್ಮ ವೀರಶೈವ ಸಮಾಜದವರ ವಿದ್ಯಾಭ್ಯಾಸಕ್ಕೆ

ಪ್ರೋತ್ಸಾಹವನ್ನು ಕೊಡತಕ್ಕದ್ದೆಂದು ಆ ಆ ಸರಕಾರಕ್ಕೆ ಮಹಾಸಭೆಯವರು ಪ್ರಾರ್ಥನೆಯನ್ನು ಮಾಡುತ್ತಾರೆ.

೮. ವೀರಶೈವ ಮತದ ಪೂರ್ವಿಕರ ಇತಿಹಾಸವನ್ನು ರಚಿಸಿ ಪ್ರಸಿದ್ಧ ಪಡಿಸುವದರಿಂದ ನಮ್ಮಲ್ಲಿ ಹಿಂದಿನ ಕಾಲದಲ್ಲಿ ಆಗಿಹೋದಂಥ ಪಂಡಿತರು ತತ್ವಜ್ಞಾನಿಗಳು, ಶರಣರು, ಕವಿಗಳು, ಶೂರರು ಮೊದಲಾದ ಮಹಾತ್ಮರ ಸ್ಮರಣ ವನ್ನು ಎಲ್ಲರಿಗೂ ಮಾಡಿಕೊಟ್ಟಂತಾಗುವದಲ್ಲದೆ, ಅದರಿಂದ ನಮ್ಮಲ್ಲಿ ಅಂಥ ಜನರು ಪುನಃ ಆಗಲಿಕ್ಕೆ ಉತ್ತೇಜನವು ದೊರಕುವದೆಂಬ ಕಾರಣದಿಂದ ಮಹಾ ಸಭೆಯವರು ಒಂದು ಸಂಘದವರ ಕಡೆಯಿಂದ ಈ ಮಹತ್ತಾದ ಕೆಲಸವನ್ನು ಮಾಡಿಸತಕ್ಕದ್ದೆಂದು ನಿರ್ಣಯ ಮಾಡುತ್ತಾರೆ.

೯. ವೀರಶೈವ ಮಹಾಸಭೆಯಿಂದ ನಮ್ಮ ಸಮಾಜದಲ್ಲಿ ಪರಸ್ಪರವಾಗಿ ಐಕ್ಯಸ್ನೇಹಾದಿಗಳನ್ನು ಬೆಳಿಸಲಿಕ್ಕೂ ನಮ್ಮ ರೀತಿ ನಡವಳಿಕೆಗಳನ್ನು ತಿದ್ದಿಕೊ ಳ್ಳುವದಕ್ಕೂ ನಮ್ಮ ಧರ್ಮಗ್ಲಾನಿಯನ್ನು ಹೋಗಲಾಡಿಸುವದಕ್ಕೂ ವಿದ್ಯಾ ವ್ಯಾಪಾರಾದಿಗಳನ್ನು ಬೆಳಿಸಲಿಕ್ಕೂ ಅತ್ಯಂತ ಉಪಯೋಗವಾಗುವದರಿಂದ, ಮಹಾಸಭೆಯು ಹಿಂದುಸ್ಥಾನದ ಆ ಆ ಭಾಗಗಳಲ್ಲಿ ಪ್ರತಿವರ್ಷ ತಪ್ಪದೆ ನೆರೆಯು ವದು ಅತ್ಯವಶ್ಯವಾದುದೆಂತಲೂ ಅದರಲ್ಲಾಗುವ ನಿರ್ಣಯಗಳನ್ನು ಪ್ರಚಾರ ದಲ್ಲಿ ತರಲಿಕ್ಕೆ 'ಸ್ಟ್ಯಾಂಡಿಂಗ ಕಮೀಟಿ, ಪ್ರಾಂತಿಕ ಕಮೀಟಿ, ಜಿಲ್ಹಾ ಕಮೀಟಿ, ತಾಲೂಕ ಕಮೀಟಿ, ಗ್ರಾಮಕಮೀಟಿ' ಮೊದಲಾದ ಸಂಸ್ಥೆಗಳನ್ನು ಅಲ್ಲಲ್ಲಿ ಸ್ಥಾಪಿ ಸಬೇಕೆಂತಲೂ ಸಹ ಮಹಾಸಭೆಯವರು ನಿರ್ಣಯ ಮಾಡುತ್ತಾರೆ.

೧೦. ವೀರಶೈವರಲ್ಲಿ ದೇಶಕಾಲಭೇದದಿಂದ ಆಚಾರ ಭೇದಗಳು ಕಂಡು ಬರುವದರಿಂದ, ಅವುಗಳನ್ನು ಏಕರೂಪವಾಗಿ ಮಾಡಬೇಕು. ಮತ್ತೂ ಎಲ್ಲ ಕಡೆ ಯವರೂ ಸ್ವಮತದವರಿಂದಲೇ ಲಗ್ನಾದಿ ಕಾರ್ಯಗಳನ್ನು ಮಾಡಿಸತಕ್ಕದ್ದು ಎಂಬುದಾಗಿ ಮಹಾಸಭೆಯವರು ನಿರ್ಣಯ ಮಾಡುತ್ತಾರೆ.

೧೧. ವೀರಶೈವರಿಗೆ ವ್ಯಾಪಾರವೇ ಒಂದು ಮಹತ್ತರವಾದ ಜೀವನೋ ಪಾಯವಾಗಿರುವದರಿಂದ ಅದನ್ನು ನಾವು ಈಗಿನಕಿಂತಲೂ, ಬಹಳ ಹೆಚ್ಚಿಸಿ ಮತ್ತೂ ಪರದೇಶಗಳ ಕೂಡ ಸಹ ನಮ್ಮ ವ್ಯಾಪಾರವನ್ನು ನಡಿಸಿ ವ್ಯಾಪಾರದಿಂ ದಾಗುವ ಯಾವತ್ತೂ ಪೂರ್ಣ ಲಾಭವನ್ನು ಮಾಡಿಕೊಳ್ಳತಕ್ಕದ್ದೆಂತಲೂ ನಮ್ಮ ಲ್ಲಿ ಮುಂಬಯಿ ಚೆಂಬರ ಆಫ್ ಕಾಮರ್ಸದ ಮಾದರಿಯಂತೆ "ಭರತಖಂಡದ ವೀರಶೈವ ವ್ಯಾಪಾರಸ್ಥರ ಸಂಘವನ್ನು ಸ್ಥಾಪಿಸಬೇಕೆಂತಲೂ ಮಹಾಸಭೆಯವ ರು ನಿರ್ಣಯ ಮಾಡುತ್ತಾರೆ.

೧೨. ವೀರಶೈವ ಸಮಾಜದಲ್ಲಿ ಒಂದು ವೇಳೆ ಲಿಂಗಧಾರಣೆ ಮಾಡಿಕೊಂಡ ಬಳಿಕ ದೇಹಾವಧಿಯಾಗಿ ಯಾವ ಸಮಯದಲ್ಲಿಯೂ ಆ ಲಿಂಗವನ್ನು ಪರಿತ್ಯಜಿಸಕೂಡದೆಂದು ನಿರ್ಬಂಧವುಂಟು. ಅಂಥ ಲಿಂಗಪರಿತ್ಯಾಗ ಮಾಡಿದವರು ಧರ್ಮಭ್ರಷ್ಟರೆನಿಸಿಕೊಳ್ಳುವರು. ಅಂಥವರ ಹಸ್ತದಿಂದ ಅನ್ನಪಾನಾದಿಗಳನ್ನು ಸ್ವೀಕರಿಸುವದು ಸಮಾಜದಲ್ಲಿ ಆಚಾರಲೋಪಕ್ಕೆ ಹೆಚ್ಚು ಕಾರಣವಾಗುವದು. ಆದುದರಿಂದ ಅದನ್ನು ತಪ್ಪಿಸುವದು ಅವಶ್ಯಕವಾದ ಕಾರಣ, ಯಾವನೊಬ್ಬ ಲಿಂಗಧಾರಿಯೂ ದೇಹಾವಧಿಯಾಗಿ ಲಿಂಗಪರಿತ್ಯಾಗವನ್ನು ಮಾಡದೆ ಇರಬೇಕೆಂದು ಮಹಾಸಭೆಯವರು ನಿರ್ಧರಿಸುತ್ತಾರೆ. ಮತ್ತೂ ಅಂಥ ನಿರ್ಧಾರವನ್ನು ವ್ಯವಹಾರದಲ್ಲಿ ತರಿಸುವದಕ್ಕೆ ಮಹಾಸಭೆಗೆ ಪ್ರತಿನಿಧಿಗಳಾಗಿ ಬಂದಿರುವವರೆಲ್ಲರೂ ತಮ್ಮ ತಮ್ಮ ಪ್ರಾಂತದಲ್ಲಿ ವ್ಯವಸ್ಥೆಯನ್ನಿಡಿಸಬೇಕೆಂದು ಮಹಾಸಭೆಯವರು ನಿರ್ಣಯ ಮಾಡುತ್ತಾರೆ.

೧೩. ಒಕ್ಕಲತನವು ಸಹ ವೀರಶೈವರ ಅತ್ಯಂತ ಮಹತ್ತರವಾದ ಮತ್ತೂ ಮುಖ್ಯವಾದ ಜೀವನೋಪಾಯವಾಗಿರುತ್ತಿದ್ದು, ಅದನ್ನು ಹಳೇಪದ್ಧತಿಯ ಪ್ರಕಾರ ನಡೆಸುತ್ತ ಕುಳ್ಳಿರದೆ, ಹೊಸದಾಗಿ ಇಂಗ್ಲಂಡ, ಜರ್ಮನಿ ಮೊದಲಾದ ಸುಧಾರಿಸಿದ ದೇಶಗಳಲ್ಲಿ ಸಿದ್ಧವಾಗಿರುವ ಹೊಸ ಮಾದರಿಯ ಒಕ್ಕಲತನದ ಯಂತ್ರಗಳನ್ನೂ ಹಾಗು ಬೇರೆ ಬೇರೆ ದೇಶದ ಉತ್ತಮೋತ್ತಮ ಬೀಜವನ್ನೂ ಗೊಬ್ಬರಗಳನ್ನೂ ಉಪಯೋಗಿಸತಕ್ಕದೆಂದೂ, ಹಾಗು ಮಹಾಸಭೆಯೊಡನೆ ಪ್ರತಿವರ್ಷ "ಒಕ್ಕಲತನ ಪ್ರದರ್ಶನ" ಮಾಡಲಿಕ್ಕೆ ಆ ಆ ಸರಕಾರದ ವ್ಯವಸಾಯಶಾಖೆಯವರಿಗೆ ಪ್ರಾರ್ಥನೆಯನ್ನು ಮಾಡತಕ್ಕದೆಂದೂ ಮಹಾಸಭೆಯವರು ನಿರ್ಣಯ ಮಾಡುತ್ತಾರೆ. ಇದಲ್ಲದೆ ಈ ಸಾರೆ ಮುಂಬಯಿ ಸರಕಾರದವರ ವ್ಯವಸಾಯ ಶಾಖೆಯವರು ಶಿ॥ ರಾ॥ ರಾ॥ ರುದ್ರಯ್ಯಾ ಹಿರೇಮಠ ಆದರಗುಂಚಿ ಇವರನ್ನು ತಮ್ಮ ಪ್ರತಿನಿಧಿಯಾಗಿ ಕಳಿಸಿ ಕೊಟ್ಟದ್ದಕ್ಕಾಗಿ ಮಹಾಸಭೆಯವರು ತಮ್ಮ ಕೃತಜ್ಞತೆಯನ್ನು ಪ್ರದರ್ಶಿಸುತ್ತಾರೆ. ಹಾಗೂ ಮುಂದಿನ ಸಭೆಗಳಲ್ಲಿ ಮುಂಬಯಿ ಸರಕಾರದ ವ್ಯವಸಾಯ ಶಾಖೆಯವರು ತಮ್ಮ ಕಡೆಯ ಉಪನ್ಯಾಸಕರನ್ನು (Expert lecturers) ಕಳಿಸಬೇಕಾಗಿ ಮಹಾಸಭೆಯವರು ಆ ಶಾಖೆಯವರಿಗೆ ವಿನಂತಿ ಮಾಡಿಕೊಳ್ಳುತ್ತಾರೆ.

೧೪. ವೀರಶೈವ ಸಮಾಜದಲ್ಲಿ (೧) ಬಾಲವಿವಾಹ, (೨) ೫೦ ವರ್ಷದ ನಂತರ ಆಗುವ ವೃದ್ಧವಿವಾಹ, (೩) ತೆರವು ತೆಗೆದುಕೊಳ್ಳುವದು, (೪) ವರದಕ್ಷಣೆ ತೆಗೆದುಕೊಳ್ಳುವದು, (೫) ಲಗ್ನ ಪುರಾಣಾದಿ ಕಾರ್ಯಗಳಲ್ಲಿ ದುಂದುತನ

ದಿಂದ ಹಣವನ್ನು ವೆಚ್ಚ ಮಾಡುವದು, (೬) ಗಂಡಹೆಂಡರ ಸೋಡಚೀಟಿ (ತ್ಯಾಗ ಪತ್ರ) ಕೊಡುವದು, ಇವೇ ಮೊದಲಾದ ಸಾಮಾಜಿಕ ದೋಷಗಳನ್ನು ಯಾವ ತ್ತೂ ವೀರಶೈವರು ತೆಗೆದುಹಾಕತಕ್ಕದ್ದೆಂದು ಮಹಾಸಭೆಯವರು ನಿರ್ಣಯ ಮಾಡುತ್ತಾರೆ.

೧೫. ವೀರಶೈವ ಸಮಾಜದಲ್ಲಿ ಪ್ರತಿಯೊಂದು ಸಣ್ಣದೊಡ್ಡ ಪಟ್ಟಣಗ ಳಲ್ಲಿ ದ್ವೈವಿಧ್ಯಗಳು ಮತ್ತೂ ದೊಡ್ಡ ದೊಡ್ಡ ಜನರೊಳಗೆ ದ್ವೇಷಗಳು ಇರು ವದರಿಂದ ಇವುಗಳಿಂದ ವ್ಯಕ್ತಿಗಳಲ್ಲಿ ಮಾತ್ರ ಕಲಹಗಳು ಆಗುತ್ತಿರದೆ, ಸಮಾ ಜದ ಹಿತದ ಕೆಲಸಗಳಿಗೆ ಬಹಳ ಬಾಧಕವಾಗುವದರಿಂದ ಇಂಥ ದ್ವೈವಿಧ್ಯಗ ಳನ್ನೂ ದ್ವೇಷಗಳನ್ನೂ ಯಾಪತ್ತೂ ವೀರಶೈವರು ಸುಶಿಕ್ಷಣ ಮತ್ತು ವಿದ್ಯಾ ಭಿವೃದ್ಧಿಗಳ ಸಹಾಯದಿಂದ ಬಿಟ್ಟುಬಿಡತಕ್ಕದ್ದೆಂತಲೂ ಆ ಪ್ರಕಾರ ಬಿಟ್ಟುಬಿಡ ದೆ ಯಾರು ಇಂಥ ದ್ವೈವಿಧ್ಯಗಳನ್ನೂ ದ್ವೇಷಗಳನ್ನೂ ನಡಿಸಲಿಕ್ಕೆ ಅಥವಾ ಬೆಳಸಲಿಕ್ಕೆ ಪ್ರಯತ್ನ ಮಾಡುವರೋ ಅಂಥವರನ್ನು ವೀರಶೈವ ಸಮಾಜದವ ರು ಧಿಃಕ್ಕಾರ ಮಾಡಬೇಕೆಂತಲೂ ಮಹಾಸಭೆಯವರು ನಿರ್ಣಯ ಮಾಡುತ್ತಾರೆ.

೧೬. ವೀರಶೈವ ಮತವು ವೇದಾಗಮೋಪನಿಷತ್ತುಗಳಿಂದ ಸಂಸಿದ್ಧವಾ ದ ಉಚ್ಚ ಮತವಿದ್ದು, ವೀರಶೈವರ ಶುದ್ಧಾಚರಣೆಗಳೂ, ಧರ್ಮಕರ್ಮಗಳೂ ಬಹಳ ಪವಿತ್ರವಾದವುಗಳೂ, ಶ್ರೇಷ್ಠವಾದವುಗಳೂ ಇದ್ದು, ಅವರಿಗೆ ಒಬ್ಬಾ ನೊಬ್ಬ ಮತಸ್ಥರಭಿಮಾನದಿಂದಲೂ ತಪ್ಪುತಿಳುವಳಿಕೆಯಿಂದಲೂ ಶೂದ್ರರೆಂ ದು ಅನ್ನುವದು ತಪ್ಪಿರುತ್ತದೆ. ಇದನ್ನು ಮುಂಬಯಿ ಹೈಕೋರ್ಟ, ಕೊಲ್ಹಾ ಪೂರ ಹೈಕೋರ್ಟ ಮೊದಲಾದ ನ್ಯಾಯಾಸ್ಥಾನಗಳಲ್ಲಿ ಸ್ಥಾಪಿಸಿಕೊಳ್ಳುವ ಪ್ರಯ ತ್ನಕ್ಕೆ ಯಾವತ್ತೂ ವೀರಶೈವ ಸಮಾಜದವರು ಪೂರ್ಣ ಸಹಾಯವನ್ನು ಮಾಡತಕ್ಕದ್ದೆಂದು ಮಹಾಸಭೆಯವರು ನಿರ್ಣಯ ಮಾಡುತ್ತಾರೆ. ಮತ್ತೂ ಕೊಲ್ಹಾಪೂರ ಸಂಸ್ಥಾನದ ಪೈಕಿ ದುಂಡಗಿಯ ವತನಿ ಪ್ರಕರ್ಣದ ಬಗ್ಗೆ ಮಹಾಸಭೆಯ ಠರಾವು ಸಹಿತವಾಗಿ ಕೊಲ್ಹಾಪೂರ ಸರಕಾರದ ಕಡೆಗೆ ಅರ್ಜಿ ಮಾಡಿಕೊಳ್ಳತಕ್ಕದ್ದೆಂದೂ ಮಹಾಸಭೆಯವರು ನಿರ್ಣಯ ಮಾಡುತ್ತಾರೆ.

೧೭. ಹಿಂದಿನ ಮಹಾಸಭೆಗಳಲ್ಲಿ ಆದ ನಿರ್ಣಯಗಳನ್ನು ಪ್ರಚಾರದಲ್ಲಿ ತರಲಿಕ್ಕೆ ಆ ಆ ಪ್ರಾಂತದ ಜನರು ತಮ್ಮ ತಮ್ಮ ಸ್ಥಳದಲ್ಲಿ ಮಾಡಿದ ಪ್ರಯತ್ನದ ಮತ್ತೂ ಕೆಲಸದ ಸಂಬಂಧವಾಗಿ ವರದಿಯನ್ನು ಪ್ರತಿಯೊಂದು ಮಹಾಸಭೆ ಯಲ್ಲಿ ಓದತಕ್ಕುದೆಂದು ಮಹಾಸಭೆಯವರು ನಿರ್ಣಯ ಮಾಡುತ್ತಾರೆ.

೧೮. ನಮ್ಮ ವೀರಶೈವ ಸಮಾಜದ ಉನ್ನತಿಯು ಬೇಗನೆ ಆಗಬೇಕಾದರೆ ಪುರುಷರಂತೆ ಸ್ತ್ರೀಯರಲ್ಲಿ ಸಹ ವಿದ್ಯಾಭ್ಯಾಸವಾಗುವದು ಅಗತ್ಯವಾಗಿರುವುದ

ರಿಂದ ಪ್ರತಿಯೊಬ್ಬರೂ ತಮ್ಮ ಮನೆಯಲ್ಲಿ ಸ್ತ್ರೀಶಿಕ್ಷಣವನ್ನು ಕೊಡುವದಕ್ಕೆ ಮನಃಪೂರ್ವಕವಾಗಿ ಪ್ರಯತ್ನಮಾಡತಕ್ಕದೆಂದು ಮಹಾಸಭೆಯವರು ನಿರ್ಣಯ ಮಾಡುತ್ತಾರೆ.

೧೯. ಹೈದರಾಬಾದಿನಲ್ಲಿ ಈಚೆಗೆ ಆದ ಜಲಪ್ರಳಯದಿಂದ ಆ ಸಂಸ್ಥಾನ ದಲ್ಲಿರುವ ವೀರಶೈವರ ಮನೆಮಾರುಗಳು ಹಾಳಾಗಿ ಹೋಗಿ ವಿಪುಲವಾದ ಸಂಪತ್ತೂ ಅನೇಕ ಅಮೌಲ್ಯವಾದ ಜೀವರಾಶಿಯು ನಾಶಹೊಂದಿದ್ದರಿಂದ ಮಹಾ ಸಭೆಯವರು ಅಲ್ಲಿನ ತಮ್ಮ ವೀರಶೈವ ಬಾಂಧವರಿಗೆ ಸಂಪೂರ್ಣವಾದ ಸಹಾ ನುಭೂತಿಯನ್ನು ತೋರಿಸುವದಕ್ಕಾಗಿ ೫೦೦ ರೂಪಾಯಿಗಳನ್ನು ಕಳಿಸಿಕೊಡಬೇ ಕೆಂದು ನಿರ್ಣಯ ಮಾಡುತ್ತಾರೆ.

## ೫ ನೆಯ ಸಭೆ (೧೯೦೯)—ಬಳ್ಳಾರಿ.

೧. ಹಿಂದುಸ್ಥಾನದ ವ್ಹಾಯಿಸರಾಯರಾದ ಲಾರ್ಡ ಮಿಂಟೋ ದೊರೆಗಳ ಪ್ರಾಣಕ್ಕೆ ಸಿಡಿಮದ್ದಿನಿಂದ (ಬಾಂಬ ಗುಂಡಿನಿಂದ) ಅಪಾಯವನ್ನುಂಟುಮಾಡು ವದಕ್ಕಾಗಿ ಒಬ್ಬಾನೊಬ್ಬ ರಾಜದ್ರೋಹಿಯು ಮಾಡಿದ ಪ್ರಯತ್ನವು ಅಧಮತ ನದ್ದಾಗಿರುವದರಿಂದ, ೫ ನೇ ವೀರಶೈವ ಮಹಾಸಭೆಯವರಾದ ನಾವು ಅದನ್ನು ಸಂಪೂರ್ಣವಾಗಿ ನಿಷೇಧಿಸುತ್ತೇವೆ. ಮತ್ತೂ ಜಗದೀಶ್ವರನ ಕೃಪೆಯಿಂದ ಲಾರ್ಡ ಮಿಂಟೋ ದೊರಗಳು ಈ ಗಂಡಾಂತರದಿಂದ ವಿಮುಕ್ತರಾದುದಕ್ಕಾಗಿ ನಾವು ಆನಂದವನ್ನು ಪ್ರದರ್ಶಿಸುತ್ತೇವೆ.

೨. ಲೋಕಪ್ರಿಯರೂ ನ್ಯಾಯಶೀಲರೂ, ದಯಾಳುಗಳೂ, ವಿದ್ವಾಂಸ ರೂ, ಆದ ನಾಶಿಕದ ಕಲೆಕ್ಟರ ಮೆ॥ ಜಾಕ್ಸನ್ ಸಾಹೇಬರನ್ನು ಒಬ್ಬಾನೊಬ್ಬ ರಾಜದ್ರೋಹಿಯಾದ ತರುಣನು ಅಧಮತನದಿಂದ ಕೊಲೆಮಾಡಿದ ಕಾರಣ ಈ ವೀರಶೈವ ಮಹಾಸಭೆಯವರಾದ ನಾವು ನಮಗೆ ಉಂಟಾಗಿರುವ ದುಃಖವ ನ್ನು ಪ್ರದರ್ಶಿಸುವದಲ್ಲದೆ, ಆ ನೀಚಕೃತ್ಯವನ್ನು ಸಂಪೂರ್ಣವಾಗಿ ನಿಷೇಧಿಸು ತ್ತೇವೆ.

೩. ಬ್ರಿಟಿಶ ಸಾರ್ವಭೌಮರ ಆಧಿಪತ್ಯದಿಂದ ನಮ್ಮ ವೀರಶೈವ ಜನರ ಅಭಿವೃದ್ಧಿಗೆ ಸೌಕರ್ಯವೂ, ಸ್ವಾಸ್ಥ್ಯವೂ ದೊರೆದಿದ್ದು ಅವು ಇನ್ನೂ ದಿನೇ ದಿನೇ ಹೆಚ್ಚು ಹೆಚ್ಚಾಗಿ ದೊರೆಯುತ್ತಿರುವ ಕಾರಣ, ನಾವು ನಮ್ಮ ರಾಜನಿಷ್ಠೆ ಯನ್ನೂ, ಕೃತಜ್ಞತೆಯನ್ನೂ ಪ್ರದರ್ಶಿಸುವದಲ್ಲದೆ, ಬ್ರಿಟಿಶ ರಾಜ್ಯಾಧಿಕಾರವು ಭರತಖಂಡದಲ್ಲಿ ಚಿರಕಾಲವಾಗಿ ಬಾಳಲೆಂದು ಶ್ರೀಮತ್ಪರಮೇಶ್ವರನನ್ನು ಅನ ನ್ಯಭಾವದಿಂದ ಪ್ರಾರ್ಥಿಸುತ್ತೇವೆ,

V ೪. ಹೊಸ ಕೌನ್ಸಿಲ್ಲ ಯ್ಯಕ್ಟಿನ ಪ್ರಕಾರ ಪ್ರವಿನ್ಶಿಯಲ್ ಮತ್ತೂ ಇಂಪೀರಿಯಲ್ ಕೌನ್ಸಿಲ್ಲುಗಳ ರಚನೆಯಲ್ಲಿ ಮತ್ತೂ ಅವುಗಳ ಮೆಂಬರುಗಳ ಅಧಿಕಾರದಲ್ಲಿ ವಿಶೇಷ ಸುಧಾರಣೆಯನ್ನು ಮಾಡಿ ಇವುಗಳಲ್ಲಿ ಮುಸಲ್ಮಾನ ದೇಶಬಾಂಧವರಿಗೆ ಎಲೆಕ್ಶನ್ (ಚುನಾವಣೆಯ) ಅಧಿಕಾರವನ್ನು ಸ್ವತಂತ್ರವಾಗಿ ಕೊಟ್ಟು, ಕೌನ್ಸಿಲುಗಳಲ್ಲಿ ಆ ಜಾತಿಯವರಿಗಾಗಿ ಕೆಲವು ಸ್ಥಾನಗಳನ್ನು ಕಾದಿಡುವ ವ್ಯವಸ್ಥೆಯನ್ನು ಮಾಡಿರುವದರಿಂದ, ಅದಕ್ಕಾಗಿ ನಾವು ಸಂತೋಷಿಸುವದಲ್ಲದೆ, ನಮ್ಮ ಸಮಾಜವು ಸಂಖ್ಯೆಯಿಂದಲೂ ಉದ್ಯೋಗ, ವ್ಯಾಪಾರ, ಒಕ್ಕಲತನ ಇವುಗಳಿಂದಲೂ ವೃದ್ಧಿಹೊಂದುತ್ತಿರುವದರಿಂದ, ನಮ್ಮ ವಿದ್ಯಾಭಿವೃದ್ಧಿಗೆ ಉತ್ತೇಜನವು ದೊರಕುವದಕ್ಕಾಗಿ, ಮತ್ತೂ ರಾಜ್ಯಕಾರಭಾರಕ್ಕೆ ನಮ್ಮ ಸಮಾಜದಿಂದಲೂ ಹೆಚ್ಚು ಸೇವೆಯು ಉಂಟಾಗುವಂತೆ ಮಾಡುವದಕ್ಕಾಗಿ, ಮುಸಲ್ಮಾನರಿಗೆ ಕೊಟ್ಟಿರುವಂತೆ ನಮ್ಮ ಸಮಾಜದವರಿಗೂ ಸ್ವತಂತ್ರವಾಗಿ ಎಲೆಕ್ಶನ್ ಅಧಿಕಾರವನ್ನು ದೊರಕಿಸಿಕೊಡಬೇಕೆಂದು ನಾವು ಇಂಡಿಯಾ ಗವ್ಹರ್ನಮೆಂಟಿನವರನ್ನು ಪ್ರಾರ್ಥಿಸುತ್ತೇವೆ. ಮತ್ತೂ ಈ ಎಲೆಕ್ಶನ್ನಿನ ಹಕ್ಕು ನಮಗೆ ಸ್ವತಂತ್ರವಾಗಿ ದೊರೆಯುವ ವರೆಗೆ ನಮ್ಮಲ್ಲಿರುವ ಯೋಗ್ಯರೂ ಅನುಭವಸ್ಥರೂ ಆದ ಜನರನ್ನು ಎಂದರೆ ಕನಿಷ್ಠ ಪಕ್ಷಕ್ಕೆ ಮೂರು ಜನರನ್ನಾದರೂ ಪ್ರತಿಯೊಂದು ಕೌನ್ಸಿಲ್ಲಿಗೆ ಮತ್ತೂ ಇಬ್ಬರನ್ನು ಇಂಪೀರಿಯಲ್ ಕೌನ್ಸಿಲ್ಲಿಗೆ ನಾಮಿನೇಟ್ ಮಾಡಿಕೊಳ್ಳುವಂತೆ ಆಗಬೇಕೆಂದು ನಾವು ಇಂಡಿಯಾ ಗವ್ಹರ್ನಮೆಂಟನ್ನು ಪ್ರಾರ್ಥಿಸುತ್ತೇವೆ. ಮತ್ತೂ ಶ್ರೀಮಂತ ಸರ್ ದೇಸಾಯಿ ವಂಟಮೂರಿಕರ ಇವರನ್ನು ಮುಂಬಯಿ ಕೌನ್ಸಿಲ್ಲಿಗೆ ಈ ಸಾರೆ ನಾಮಿನೇಟ ಮಾಡಿಕೊಂಡಿರುವದಕ್ಕಾಗಿ ನಾವು ಸಂತೋಷಪ್ರದರ್ಶನವನ್ನು ಮಾಡುತ್ತೇವೆ. ಮೈಸೂರ ಸರಕಾರದವರು ತಮ್ಮ ಲೇಜಿಸ್ಲೇಟಿವ್ಹ ಕೌನ್ಸಿಲ್ಲಿಗೆ ಮೈಸೂರ ಸಂಸ್ಥಾನದ ವೀರಶೈವರ ಕಡೆಯಿಂದ ಕನಿಷ್ಠಪಕ್ಷ ಒಬ್ಬ ಮೆಂಬರನನ್ನಾದರೂ ನಾಮಿನೇಟ ಮಾಡಿಕೊಳ್ಳಬೇಕೆಂದು ಈ ಮಹಾಸಭೆಯವರಾದ ನಾವು ಪ್ರಾರ್ಥಿಸುತ್ತೇವೆ

೫. ಬಾಲ್ಯವಿವಾಹ, ವೃದ್ಧವಿವಾಹಗಳು ಆರೋಗ್ಯಶಾಸ್ತ್ರ ದೃಷ್ಟಿಯಿಂದ ಅನರ್ಥಕವಾಗಿಯೂ ಧರ್ಮಶಾಸ್ತ್ರದೃಷ್ಟಿಯಿಂದ ಅಯೋಗ್ಯವಾಗಿಯೂ ಇರುವದರಿಂದ ಅವುಗಳನ್ನು ನಮ್ಮ ಸಮಾಜದವರು ತಪ್ಪಿಸಬೇಕೆಂತಲೂ, ಪ್ರೌಢವಿವಾಹವನ್ನು ಪ್ರಚಾರದಲ್ಲಿ ತರಬೇಕೇತಲೂ ಈ ಮಹಾಸಭೆಯವರಾದ ನಾವು ನಿರ್ಧಾರ ಮಾಡಿರುತ್ತೇವೆ.

೬. ವೀರಶೈವರ ಮಿಲ್ಲು (ಗಿರಣಿ) ವೀರಶೈವರ ಬ್ಯಾಂಕು ಇವುಗಳಿಂದ ನಮ್ಮ ಸಮಾಜದ ಸಾಂಪತ್ತಿಕ ಸ್ಥಿತಿಯು ವಿಶೇಷವಾಗಿ ಸುಧಾರಿಸುವದಲ್ಲ

ದೆ ಇವುಗಳ ಉತ್ಪತ್ತಿಯ ಸ್ವಲ್ಪ ಭಾಗವನ್ನು ಉಪಯೋಗಿಸಿಕೊಳ್ಳುವದರಿಂದ ಧಾರ್ಮಿಕ ವ್ಯವಹಾರಾದಿ ಸುಧಾರಣೆಗಳನ್ನು ಮಾಡಿಕೊಳ್ಳುವದಕ್ಕೆ ತುಂಬಾ ಅನುಕೂಲಿಸಿರುವದರಿಂದ ನಮ್ಮ ಸಮಾಜದ ಪ್ರಮುಖರು ಇಂಥ ಗಿರಣಿ ಬ್ಯಾಂಕು ಇವುಗಳನ್ನು ಒಕ್ಕಟ್ಟಿನಿಂದ ಸ್ಥಾಪಿಸುವ ಯತ್ನವನ್ನು ಕೈಕೊಳ್ಳಬೇಕೆಂದು ಈ ಮಹಾಸಭೆಯವರಾದ ನಾವು ನಿರ್ಧಾರ ಮಾಡಿರುತ್ತೇವೆ.

೭. ಪಟ್ಟಚರಮೂರ್ತಿ ವಿರಕ್ತ-- ಈ ಅಧಿಕಾರ ಸ್ಥಾನಗಳಿಗೆ ವಿದ್ಯಾಶೀಲಾದಿ ಯೋಗ್ಯತೆಯುಳ್ಳ ಅಯ್ಯಾಚಾರದ ಮನೆತನದ ಗುರುಸ್ಥಲದ ವಟುಗಳನ್ನೇ ಆರಿಸಿಕೊಳ್ಳಲು ಪ್ರತಿಯೊಂದು ಸ್ಥಲದ ವೀರಶೈವರು ಪ್ರಯತ್ನವನ್ನು ಮಾಡಬೇಕೆಂದು ಈ ಮಹಾಸಭೆಯವರಾದ ನಾವು ನಿರ್ಧಾರ ಮಾಡಿರುತ್ತೇವೆ.

೮. ಮೈಸೂರ ಸ್ಟಾರ ಪತ್ರಿಕೆಯು ನಮ್ಮ ಸಮಾಜದ ಸುಧಾರಣೆಗೂ ಮಹಾಸಭೆಗೂ ವಿಶೇಷ ಸಹಾಯಕವಾಗಿರುವದರಿಂದ ಅದು ಪ್ರೋತ್ಸಾಹಾರ್ಥವಾಗಿ ಇನ್ನೂರಾ ಐವತ್ತು ರೂಪಾಯಿಗಳನ್ನು ಪ್ರತಿಯೊಂದು ವೀರಶೈವ ಮಹಾಸಭೆಯವರೂ ಕೊಡಬೇಕೆಂದು ಈ ಮಹಾಸಭೆಯವರು ನಿರ್ಧಾರ ಮಾಡಿರುತ್ತೇವೆ.

೯. ವೀರಶೈವ ಸಮಾಜದ ಯಾರೊಬ್ಬರೂ ಪ್ರತ್ಯಕ್ಷವಾಗಿ ರಾಜದ್ರೋಹದ ಯಾವ ಪ್ರಯತ್ನಗಳಲ್ಲಿಯೂ ಸೇರಕೂಡದೆಂತಲೂ, ಇಂಥ ಪ್ರಯತ್ನಗಳಲ್ಲಿ ಸೇರಿದವರನ್ನು ವೀರಶೈವ ಸಮಾಜದಿಂದ ತಿರಸ್ಕರಿಸತಕ್ಕದೆಂತಲೂ ಈ ಮಹಾಸಭೆಯವರು ನಿರ್ಧಾರ ಮಾಡಿರುತ್ತೇವೆ.

೧೦. ೧ ನೇ ಮಹಾಸಭೆಯವರ ಪ್ರಾರ್ಥನೆಯ ಮೇಲೆ ಮುಂಬಯಿ ಸರಕಾರದವರು ಕಾರಾಗೃಹದಲ್ಲಿ ವೀರಶೈವ ಮತದ ಕೈದಿಗಳ ದೇಹದಿಂದ ಲಿಂಗವಿಯೋಗವನ್ನು ಮಾಡದೆ ಇರುವಂತೆ ಏರ್ಪಡಿಸಿಕೊಟ್ಟ ಪ್ರಕಾರ, ಮೈಸೂರ ಮತ್ತು ಮದ್ರಾಸ ಸರಕಾರದವರೂ ಮಾಡಿಕೊಡಬೇಕೆಂದು ಅವರನ್ನು ಪ್ರಾರ್ಥಿಸಬೇಕೆಂಬದಾಗಿ ಈ ಮಹಾಸಭೆಯವರು ನಿರ್ಧರಿಸಿರುತ್ತೇವೆ. ಮತ್ತೂ ನಿಜಾಮ ಸರಕಾರದವರು ಪೂರ್ವದಿಂದಲೂ ವೀರಶೈವರ ಕೈದಿಗಳನ್ನು ಲಿಂಗವಿಹೀನರನ್ನಾಗಿ ಮಾಡದೆಯೂ, ಅವರ ಸಜಾತೀಯರಿಂದಲೇ ಅನ್ನೋದಕಗಳನ್ನು ಕೊಡಿಸುವ ವ್ಯವಸ್ಥೆಯನ್ನು ಮಾಡಿಯೂ ಇರುತ್ತಾರೆಂಬುದನ್ನು ತಿಳಿದು ಈ ಮಹಾಸಭೆಯವರು ನಮ್ಮ ಕೃತಜ್ಞತೆಯನ್ನು ಆ ಸರಕಾರಕ್ಕೆ ಪ್ರದರ್ಶಿಸುತ್ತೇವೆ.

## ೬ನೆಯ ಸಭೆ (೧೯೧೧)—ಬೆಳಗಾಂವಿ.

೧. ಶ್ರೀಮನ್ ೫ನೆಯ ಜಾರ್ಜ ಸಾರ್ವಭೌಮರೂ ಮತ್ತು ಮೇರಿ ಮಹಾರಾಜ್ಞಿಯವರೂ ಭರತಖಂಡಕ್ಕೆ ದಯಮಾಡಿಸಿ ದಿಲ್ಲಿಯ ರಾಜಧಾನಿಯಲ್ಲಿ ರಾಜ್ಯಾರೋಹಣ ಸಮಾರಂಭವನ್ನು ನೆರವೇರಿಸಿದುದಕ್ಕಾಗಿ ಈ ವೀರಶೈವ ಮಹಾಸಭೆಯವರು ಅಭಿನಂದಿಸುತ್ತಾರೆ.

೨. ಶೈವಸಿದ್ಧಾಂತ ಸಭೆಯವರು ನಮ್ಮ ವೀರಶೈವ ಧರ್ಮದಲ್ಲಿ ಶ್ರದ್ಧೆಯನ್ನು ವಹಿಸಿ ಅದರ ಅಭಿವೃದ್ಧಿಯನ್ನು ಕೋರುತ್ತಿರುವ ಬಗ್ಗೆ ಈ ವೀರಶೈವ ಮಹಾಸಭೆಯವರು ಅವರನ್ನು ವಂದಿಸುತ್ತಾರೆ.

೩. ಕೊಲ್ಹಾಪೂರದ ಛತ್ರಪತಿ ಶಾಹೂಮಹಾರಾಜರವರಿಗೆ ಸಾರ್ವಭೌಮರವರು ತಮ್ಮ ಕಿರೀಟಧಾರಣ ಮಹೋತ್ಸವ ಸಮಾರಂಭದಲ್ಲಿ ಜಿ. ಸಿ. ಎಸ್. ಐ. ಪ್ರಶಸ್ತಿಯನ್ನು ದಯಪಾಲಿಸುದುದಕ್ಕಾಗಿ ಈ ವೀರಶೈವ ಮಹಾಸಭೆಯವರು ಮಹಾರಾಜರನ್ನು ಅಭಿನಂದಿಸುತ್ತಾರೆ.

೪. ನಮ್ಮ ಶ್ರೀಮದ್ವೀರಶೈವ ಧರ್ಮವು ಸನಾತನವೂ ವೇದಾಗಮೋಪನಿಷತ್ಶ್ರುತಿಪಾದ್ಯವೂ ಉದಾರಮತ ಪರಿಪ್ಲುತವೂ ಆಗಿರುವದರಿಂದ ಅದರಂತೆ ಶ್ರದ್ಧಾಭಕ್ತಿಪುರಸ್ಸರವಾಗಿ ತಸ್ಮತೀಯರು ಹರ್ತಿಸಬೇಕೆಂದು ಈ ಮಹಾಸಭೆಯವರು ಅಭಿಪ್ರಾಯಪಡುತ್ತಾರೆ.

೫. ನಮ್ಮ ಸಮಾಜದಲ್ಲಿ ಪ್ರತಿಕುಟುಂಬದವರೂ ಪ್ರಾಥಮಿಕ ಶಿಕ್ಷಣವನ್ನು ಹೆಚ್ಚಿಸಬೇಕೆಂತಲೂ ತರುವಾಯ ಮಧ್ಯಮ ಶಿಕ್ಷಣವನ್ನು ಕೊಡತಕ್ಕದ್ದೆಂತಲೂ ಬಡವರಾದ ವಿದ್ಯಾರ್ಥಿಗಳ ಸಹಾಯಕ್ಕೋಸ್ಕರ ಧನನಿಧಿಗಳನ್ನು ಸ್ಥಾಪಿಸಬೇಕೆಂತಲೂ ಅವರ ನೈತಿಕ ಧಾರ್ಮಿಕ ಮತ್ತು ಶಾರೀರಕ ಉನ್ನತಿಗಾಗಿ ಅಲ್ಲಲ್ಲಿ ಬೋರ್ಡಿಂಗುಗಳನ್ನು ಸಮಾಜದವರು ಸ್ಥಾಪಿಸಬೇಕೆಂತಲೂ ಜಂಗಮರು ಸಹ ಧರ್ಮಜ್ಞಾನದೊಡನೆ ಇಂಗ್ಲೀಷ ವಾಙ್ಮಯದ ಪರಿಚಯವನ್ನು ಮಾಡಿಕೊಳ್ಳಬೇಕೆಂತಲೂ ಮಹಾಸಭೆಯವರು ನಿರ್ಧರಿಸುತ್ತಾರೆ.

೬. ನಮ್ಮ ಸಮಾಜದ ಏಳ್ಗೆಗೆ ಸ್ತ್ರೀ ಶಿಕ್ಷಣವು ಅತ್ಯವಶ್ಯಕವಾದುದರಿಂದ ಅದನ್ನು ಪ್ರತಿಯೊಬ್ಬ ವೀರಶೈವನೂ ತನ್ನ ಹೆಣ್ಣುಮಕ್ಕಳಿಗೆ ವಿದ್ಯಾಶಿಕ್ಷಣವನ್ನು ಕೊಡತಕ್ಕದ್ದೆಂದು ಈ ಮಹಾಸಭೆಯವರು ನಿರ್ಧರಿಸುತ್ತಾರೆ

೭. ಉತ್ತರ ಕರ್ನಾಟಕದಲ್ಲಿಯ ಸರಕಾರದ ಹೈಸ್ಕೂಲುಗಳಿಗೆ ತೆಗೆದುಕೊಳ್ಳಲು ಸರಕಾರದಿಂದ ನಿಯಮಿತತಾಗಿರುವ ಒಟ್ಟು ವಿದ್ಯಾರ್ಥಿಗಳಲ್ಲಿ ೩ನೆಯ

೧ ಭಾಗಕ್ಕೆ ಲಿಂಗವಂತ ವಿದ್ಯಾರ್ಥಿಗಳನ್ನು ತೆಗೆದುಕೊಳ್ಳುವಂತೆ ಅಪ್ಪಣೆಯನ್ನು ಕೊಡಿಸಬೇಕೆಂದು ಸರಕಾರಕ್ಕೆ ಬಿನ್ನವಿಸಿಕೊಳ್ಳಬೇಕಾಗಿ ಈ ಮಹಾಸಭೆಯವರು ನಿರ್ಧರಿಸಿರುತ್ತಾರೆ.

೮. ನಮ್ಮ ವೀರಶೈವರಲ್ಲಿ ಸಾಂಪತ್ತಿಕ ಸ್ಥಿತಿಯು ಅಭಿವೃದ್ಧಿಯಾಗುವದಕ್ಕಾಗಿ ಕೋಆಪರೇಟಿವ್ಹ ಕ್ರೆಡಿಟ್ ಸೊಸಾಯಿಟಿಗಳನ್ನು ಜಾಯಿಂಟ ಸ್ಟಾಕ ಕಂಪನಿಗಳನ್ನು ಸ್ಥಾಪಿಸಬೇಕೆಂತಲೂ ಪರದೇಶದವರ ಸಂಗಡ ವ್ಯಾಪಾರವನ್ನು ಮಾಡಲಾರಂಭಿಸಬೇಕೆಂತಲೂ ಈ ಮಹಾಸಭೆಯವರು ಅಭಿಪ್ರಾಯಪಡುತ್ತಾರೆ.

೯. ನಮ್ಮ ವೀರಶೈವರಲ್ಲಿ ಅಯೋಗ್ಯವಾಗಿ ನಡೆಯುವ ದಾನಪದ್ಧತಿಗಳನ್ನು ತಪ್ಪಿಸಿಯೋಗ್ಯ ಕಾರ್ಯಗಳಿಗೆ ವಿನಿಯೋಗವಾಗುವಂತೆ ಧರ್ಮವು ಮಾಡಲ್ಪಡಬೇಕೆಂದು ಈ ಮಹಾಸಭೆಯವರು ಅಭಿಪ್ರಾಯಪಡುತ್ತಾರೆ.

೧೦ ವೀರಶೈವರಲ್ಲಿ ಒಕ್ಕಲತನವು ಒಳ್ಳೆಯ ಮಹತ್ವವಾದ ಉದ್ಯೋಗವಾಗಿರುವದರಿಂದ ಸರಕಾರದವರು ಸ್ಥಾಪಿಸಿರುವ ಪ್ರಯೋಗ ಭೂಮಿಗಳಿಗೆ ಹೋಗಿ ಪ್ರಯೋಗಗಳನ್ನು ತಿಳಿದುಕೊಳ್ಳಬೇಕೆಂತಲೂ ವ್ಯವಸಾಯ ಸಂಬಂಧವಾಗಿ ಅವರು ಪ್ರಕಟಿಸುವ ಮಾಸಿಕ ಪುಸ್ತಕಗಳನ್ನು ಸಮಾಜದವರು ತರಿಸಿಕೊಂಡು ಓದಿ ಅದರ ಉಪಯೋಗವನ್ನು ಮಾಡಿಕೊಳ್ಳಬೇಕೆಂತಲೂ ಅಲ್ಲಲ್ಲಿ ವ್ಯವಸಾಯ ಸಂಘಗಳನ್ನು ಸ್ಥಾಪಿಸಬೇಕೆಂತಲೂ ಈ ಮಹಾಸಭೆಯವರು ಅಭಿಪ್ರಾಯಪಡುತ್ತಾರೆ.

೧೧. ಮೈಸೂರ ಸ್ಟಾರ ವರ್ತಮಾನಪತ್ರವು ನಮ್ಮ ಧರ್ಮಕ್ಕೋಸ್ಕರ ಯಾವತ್ತೂ ದುಡಿಯುತ್ತಿರುವದರಿಂದ ಇದನ್ನು ಪ್ರೋತ್ಸಾಹಗೊಳಿಸುವದು ಪ್ರತಿಯೊಬ್ಬ ವೀರಶೈವ ಧರ್ಮಾಭಿಮಾನಿಯ ಮೊದಲನೇ ಕರ್ತವ್ಯವಾಗಿದೆ. ಮತ್ತು ಪ್ರತಿಯೊಂದು ಮಹಾಸಭೆಯಿಂದ ತಕ್ಕಷ್ಟು ಹಣದ ಅನುಕೂಲವನ್ನು ಕೊಡಬೇಕಾಗಿ ಈ ಮಹಾಸಭೆಯವರು ನಿರ್ಧರಿಸುತ್ತಾರೆ.

## ೭ ನೆಯ ಸಭೆ (೧೯೧೪)—ನಿಪ್ಪಾಣಿ.

೧. ವೀರಶೈವ ಸಮಾಜದವರು ಸದ್ಯಕ್ಕೆ ಕೈಕೊಂಡಿರುವ ಶ್ರೀ ಶಿವಯೋಗಮಂದಿರ, ಧಾರವಾಡ ಟಾವುನ್‌ಹಾಲ್ ಹಾಗೂ ಮುಂಬಯಿ ವೀರಶೈವಾಶ್ರಮ ಈ ಮೂರು ಕೆಲಸಗಳು ಪೂರ್ಣವಾದವಿನಃ ಕರ್ನಾಟಕ ಕಾಲೇ

ಜದ ಪ್ರಶ್ನೆಗೆ ವೀರಶೈವ ಸಮಾಜದಿಂದ ಸಹಾಯಮಾಡುವದಾಗಲಾರದೆಂದು ಈ ಮಹಾಸಭೆಯ ಅಭಿಪ್ರಾಯವಿರುತ್ತದೆ.

೨. ಸರಕಾರಿ ಹಾಯಸ್ಕೂಲುಗಳಲ್ಲಿ ಮತ್ತು ಉಳಿದ ಸಂಸ್ಥೆಗಳಲ್ಲಿ ನಮ್ಮ ಜಾತಿಯ ವಿದ್ಯಾರ್ಥಿಗಳನ್ನು ನಮ್ಮ ಜನಸಂಖ್ಯೆಯ ಪ್ರಮಾಣದ ಮೇಲಿಂದ ಸೇರಿಸಿಕೊಳ್ಳತಕ್ಕದ್ದಾಗಿ ಸರಕಾರದವರಿಗೆ ಪ್ರಾರ್ಥಿಸಬೇಕೆಂಬದಾಗಿ ಮಹಾಸಭೆಯವರು ಠರಾವು ಮಾಡಿರುತ್ತಾರೆ.

೩. ಮುಂಬಯಿಯಲ್ಲಿ ವೀರಶೈವ ಆಶ್ರಮವು ನಿರಂತರವಾಗಿ ನಡೆಯುವದಕ್ಕೋಸ್ಕರ ಒಂದು ಕಟ್ಟಡವನ್ನು ಕಟ್ಟಿಸುವದಕ್ಕಾಗಿ ನಮ್ಮ ಸಮಾಜದವರು ದ್ರವ್ಯಸಹಾಯ ಮಾಡಬೇಕೆಂದು ನಮ್ಮ ಮಹಾಸಭೆಯವರು ಅಭಿಪ್ರಾಯಪಡುತ್ತಾರೆ.

೪. ಬಂಕಾಪೂರ ತಾಲೂಕು ದೇವೀಹೊಸೂರ ಶೆಟ್ರರಾದ ಮ. ರಾ. ಚನಬಸಪ್ಪಣ್ಣಾ ಕುರಬಗೊಂಡ ಇವರು ತಮ್ಮ ಸ್ವಂತ ಹಾಗೂ ಇತರರ ಸಹಾಯದಿಂದ ಕಟ್ಟಿಸಿರುವ ಇಮಾರತಿಯನ್ನು ಸರಕಾರಿ ಒಕ್ಕಲತನದ ಶಾಲೆಯ ದೆಸೆಯಿಂದ ಧರ್ಮಾರ್ಥ ಕೊಟ್ಟದ್ದಕ್ಕಾಗಿ ಮಹಾಸಭೆಯವರು ಇವರ ಉಪಕಾರವನ್ನು ನೆನೆಸುತ್ತಾರೆ. ಮತ್ತು ಈ ಕಟ್ಟಡವನ್ನು ಸರಕಾರಿ ಒಕ್ಕಲತನದ ಶಾಲೆಗೋಸ್ಕರ ತೆಗೆದುಕೊಳ್ಳಲಿಕ್ಕೆ ಒಡಂಬಟ್ಟದ್ದಕ್ಕಾಗಿ ಮಹಾಸಭೆಯವರು ಸರಕಾರದವರ ಉಪಕಾರವನ್ನು ಸ್ಮರಿಸುತ್ತಾರೆ.

೫. ಹುಬ್ಬಳ್ಳಿ ಮೂರುಸಾವಿರಮಠದ ಜಗದ್ಗುರುಗಳಾದ ಗಂಗಾಧರ ಸ್ವಾಮಿಗಳು ತಮ್ಮ ಸ್ವಂತ ಹಾಗೂ ಭಕ್ತರ ಸಹಾಯದಿಂದ ಕಾಟನ್ ಪ್ರೇಸಿಂಗ ಕಂಪನಿ ಸ್ಥಾಪಿಸಿದ್ದು, ಅದರ ವಾರ್ಷಿಕ ಉತ್ಪನ್ನದ ಒಂದುನಾಲ್ಕಾಂಶ ಭಾಗವನ್ನು ನಮ್ಮ ಸಮಾಜದ ಇಂಗ್ಲಿಷ ವಿದ್ಯಾರ್ಥಿಗಳ ವಿದ್ಯಾಭ್ಯಾಸದ ಪ್ರೋತ್ಸಾಹನಕ್ಕಾಗಿ ಕೊಡಲಿಕ್ಕೆ ಒಡಂಬಟ್ಟು ಅದರಂತೆ ನಿಯಮಗಳನ್ನು ಆರ್ಟಿಕಲ್ಸ ಆಫ್ ಅಸೋಶಿಯೇಶನದಲ್ಲಿ ಸೇರಿಸಿದ್ದಕ್ಕಾಗಿ ಮಹಾಸಭೆಯವರು ಶ್ರೀಗಳವರ ಉಪಕಾರವನ್ನು ಬಹಳವಾಗಿ ನೆನೆಸುತ್ತಾರೆ.

೬. ಬಂಕಾಪೂರ ಮತ್ತು ಆಲೂರ ವೀರಶೈವ ಸದ್‌ಗೃಹಸ್ಥರು ತಮ್ಮ ಆಂಗ್ಲೋ ವ್ಹರ್ನ್ಯಾಕ್ಯೂಲರ ಸ್ಕೂಲುಗಳನ್ನು ಸ್ಥಾಪಿಸಿಕೊಂಡು ಬಹಳ ಅಭಿಮಾನದಿಂದ ನಡಿಸುತ್ತಾರಂತಾ ಕೇಳಿ ಮಹಾಸಭೆಯವರು ಅವರ ಉಪಕಾರಗಳನ್ನು ನೆನೆಸುತ್ತಾರೆ.

೭. ಬೆಳಗಾಂವ, ಶಹಾಪೂರ, ಸಂಪಗಾಂವ, ಬಾಗಲಕೋಟ, ಕೊಲ್ಹಾಪೂರ, ಹುಬ್ಬಳ್ಳಿ, ಬಂಕಾಪೂರ, ಆಲೂರ, ದೇವಿಹೊಸೂರ, ಮಹಾಲಿಂಗ

ಪೂರ ಈ ಊರುಗಳಲ್ಲಿ ಇಂಗ್ಲೀಷ ವಿದ್ಯಾರ್ಥಿಗಳ ಊಟದ ಅನುಕೂಲತೆಗಾಗಿ ಬೋರ್ಡಿಂಗುಗಳನ್ನು ಸ್ಥಾಪನೆ ಮಾಡಿದ್ದು ಅವುಗಳನ್ನು ಒಳ್ಳೇ ವ್ಯವಸ್ಥೆಯಿಂದ ನಡಿಸುತ್ತಾರೆಂಬ ಬಗ್ಗೆ ಮಹಾಸಭೆಯವರು ಆಯಾಯ ಬೋರ್ಡಿಂಗುಗಳ ಚಾಲಕರ ಮತ್ತು ಅವುಗಳ ಸಹಾಯಕರ ಉಪಕಾರ ನೆನೆಸುತ್ತಾರೆ.

೮. ನಮ್ಮ ಸಮಾಜದವರಿಗೆ ವ್ಯಾಪಾರವು ಮುಖ್ಯ ಉದ್ಯೋಗವಿದ್ದು ಅದನ್ನು ಬೆಳಿಸಲಿಕ್ಕೆ ಹಾಗೂ ಸುಧಾರಿಸಲಿಕ್ಕೆ ಪ್ರಯತ್ನ ಮಾಡುವದು ನಮ್ಮ ಸಮಾಜದ ಮುಖ್ಯ ಕರ್ತವ್ಯಕರ್ಮ ಇರುವದರಿಂದ ನಮ್ಮ ಸಮಾಜದ ವತಿಯಿಂದ ಹುಬ್ಬಳ್ಳಿ ಮತ್ತು ಬಾಗಲಕೋಟಿ ಇವೆರಡು ಸ್ಥಳಗಳಲ್ಲಿ ಬ್ಯಾಂಕುಗಳನ್ನು ಸ್ಥಾಪಿಸತಕ್ಕದ್ದೆಂತಲೂ, ಆ ಬ್ಯಾಂಕುಗಳಿಂದ ಬರುವ, ಉತ್ಪನ್ನದ ಒಂದು ನಾಲ್ಕಾಂಶ ಭಾಗವನ್ನು ಮಹಾಸಭೆಯವರ ಸ್ಟ್ಯಾಂಡಿಂಗ ಕಮಿಟಿಯ ಖರ್ಚಿನ ಪೋಷಣೆಗಾಗಿ, ವಗೈರೆ ಸಮಾಜ ಹಿತಕ್ಕಾಗಿ ಕೊಡತಕ್ಕದ್ದೆಂದೂ ಈ ಬ್ಯಾಂಕುಗಳ ಆರ್ಟಿಕಲ್ಸ ಆಫ್ ಅಸೋಸಿಯೇಶನದ ನೇಮುಗಳನ್ನು ಗೊತ್ತುಪಡಿಸಬೇಕೆಂತಲೂ ಮಹಾಸಭೆಯವರು ಅಭಿಪ್ರಾಯಪಡುತ್ತಾರೆ.

೯. ಧಾರವಾಡ ಲಿಂಗಾಯತ ಎಜ್ಯುಕೇಶನಲ್ ಹಾಲಿಗೆ ಹೆಚ್ಚಿಗೆ ಧನ ಸಹಾಯ ಮಾಡಬೇಕೆಂದು ಮಹಾಸಭೆಯವರು ಠರಾಯಿಸುತ್ತಾರೆ.

## ೮ನೆಯ ಸಭೆ (೧೯೧೭)— ದಾವಣಗೇರೆ.

೧. ದಾವಣಗೇರೆಯಲ್ಲಿ ಕೂಡಿದ ೮ನೇ ವೀರಶೈವ ಮಹಾಸಭೆಯು ಇಡೀ ವೀರಶೈವ ಸಮಾಜದ ಪರವಾಗಿ ಬ್ರಿಟಿಶ ಸಾಮ್ರಾಜ್ಯಕ್ಕೆ ತನ್ನ ವಿಶೇಷವಾದ ರಾಜನಿಷ್ಠೆಯನ್ನೂ, ರಾಜಭಕ್ತಿಯನ್ನೂ ವ್ಯಕ್ತಗೊಳಿಸುವದಲ್ಲದೆ, ಯುದ್ಧವು ಜಯಪ್ರದವಾಗುವದಕ್ಕೋಸ್ಕರ ಬ್ರಿಟಿಶ ಸರಕಾರಕ್ಕೆ ಜನ ಮತ್ತು ಧನಸಹಾಯವನ್ನು ಸ್ವಸಂತೋಷದಿಂದ ಮಾಡಲಿಚ್ಛಿಸುತ್ತದೆ. ಮತ್ತು ಮಿತ್ರಮಂಡಳಿಗೆ ಶ್ರೇಯಸ್ಕರವಾದ ಜಯವು ಪ್ರಾಪ್ತವಾಗಲೆಂದು ಜಗದೀಶನನ್ನು ಪ್ರಾರ್ಥಿಸುತ್ತದೆ.

೨. ಕಳೆದ ನಾಲ್ಕು ವರ್ಷಗಳಿಂದಲೂ ವೀರಶೈವ ಮಹಾಸಭೆಯು ಸೇರದಿದ್ದುದಕ್ಕೋಸ್ಕರ ಈ ಮಹಾಸಭೆಯು ವಿಷಾದವನ್ನು ಸೂಚಿಸುವದಲ್ಲದೆ, ಇನ್ನು ಮುಂದೆ ಈ ಸಭೆಯು ಸರಿಯಾಗಿ ಕೂಡುವದಕ್ಕೆ ಬೇಕಾದ ಏರ್ಪಾಟುಗಳನ್ನು ಮಾಡಬೇಕೆಂತಲೂ ಸಭೆಯ ಶಾಶ್ವತೆಗೋಸ್ಕರ ಒಬ್ಬೊಬ್ಬರಿಂದ

ಒಂದು ಸಾವಿರ ರೂ. ಗಳಿಗೆ ಕಡಿಮೆಯಿಲ್ಲದಷ್ಟು ಚಂದಾಹಣವನ್ನು ಕೂಡಿಸಿ ಒಂದು ಫಂಡನ್ನು ಏರ್ಪಡಿಸಬೇಕೆಂತಲೂ, ಮತ್ತು ಇಂಥ ಚಂದಾದಾರರಿಗೆ ಪ್ರತಿಯೊಂದು ಸಭೆಯಲ್ಲಿಯೂ ಸನ್ಮಾನನೀಯ ಸ್ಥಳವು ಕಾದಿಡಲ್ಪಡಬೇಕೆಂತಲೂ ನಿರ್ಧರಿಸುತ್ತದೆ.

೩. ಸಾಮ್ರಾಜ್ಯ ನಿಯಮನಿರ್ಮಾಣ ಸಭೆಯಲ್ಲಿಯೂ, ಎಲ್ಲ ಪ್ರಾಂತಿಕ ಶಾಸನ ಸಭೆಗಳಲ್ಲಿಯೂ, ಪ್ರಜಾಪ್ರತಿನಿಧಿ ಸಭೆಗಳಲ್ಲಿಯೂ, ಮ್ಯುನಸಿಪಾಲಿಟಿಗಳಲ್ಲಿಯೂ, ಸಂಪದಭ್ಯುದಯ ಸಭೆಗಳಲ್ಲಿಯೂ ಮತ್ತು ಇತರ ಸ್ಥಳೀಯ ಮತ್ತು ಪ್ರಾಂತಿಕ ಸಂಘಗಳಲ್ಲಿಯೂ, ಎಲ್ಲ ಸರಕಾರಿ ಇಲಾಖಾ ಉದ್ಯೋಗಗಳಲ್ಲಿಯೂ ವೀರಶೈವ ಸಮಾಜಕ್ಕೆ, ಇದರ ಜನಸಂಖ್ಯೆಗೂ ಪ್ರಾಮುಖ್ಯತೆಗೂ ತಕ್ಕಂತೆ ಸಾಮಾನ್ಯ ಚುನಾವಣೆಯಿಂದಲ್ಲದೆ ಪ್ರತ್ಯೇಕ ಚುನಾವಣೆಯಿಂದಲೂ ಪ್ರತ್ಯೇಕ ಪ್ರಾತಿನಿಧ್ಯವನ್ನು ಕೊಡಬೇಕೆಂದು ಈ ಮಹಾಸಭೆಯು ಬ್ರಿಟಿಶ ಸರಕಾರವನ್ನೂ ದೇಶೀಯ ಸಂಸ್ಥಾನಗಳನ್ನೂ ಅತಿ ನಮ್ರತೆಯಿಂದಲೂ, ರಾಜನಿಷ್ಠೆಯಿಂದಲೂ ಪ್ರಾರ್ಥಿಸುತ್ತದೆ.

೪. ನಮ್ಮ ಸಮಾಜದ ಪ್ರಖ್ಯಾತ ಗುರುಗಳಾದ ಚಿತ್ರದುರ್ಗದ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಮುರುಘರಾಜೇಂದ್ರ ಮಹಾಸ್ವಾಮಿಗಳವರು ಬ್ರಿಟಿಶ ಇಂಡಿಯಾದಲ್ಲಿಯೂ, ಇತರ ದೇಶೀಯ ಸಂಸ್ಥಾನಗಳಲ್ಲಿಯೂ ಅಡ್ಡಪಲ್ಲಕ್ಕಿ ಮತ್ತು ಪಂಚಕಲಶಗಳನ್ನು ಉಪಯೋಗಿಸುತ್ತಿರುವಂತೆ ಮೈಸೂರು ಸಂಸ್ಥಾನದಲ್ಲಿಯೂ ಉಪಯೋಗಿಸಲು ದಯವಿಟ್ಟು ಅಪ್ಪಣೆಯನ್ನು ಕೊಡಬೇಕೆಂದು ಈ ಮಹಾಸಭೆಯು ಮೈಸೂರು ಶ್ರೀಮನ್ಮಹಾರಾಜರವರನ್ನು ವಿನಯಪೂರ್ವಕವಾಗಿ ಪ್ರಾರ್ಥಿಸಿಕೊಳ್ಳುತ್ತದೆ.

೫. ವೀರಶೈವರ ಧಾರ್ಮಿಕ, ಐತಿಹಾಸಿಕ ಮತ್ತು ಸಾಹಿತ್ಯಸಂಬಂಧವಾಗಿ ಕೈಬರವಣಿಗೆಯಲ್ಲಿಯೂ, ಓಲೆಗರಿಯಲ್ಲಿಯೂ ಬರೆಯಲ್ಪಟ್ಟಿದ್ದ ಗ್ರಂಥಗಳನ್ನು ಶೇಖರಿಸುವುದಕ್ಕೋಸ್ಕರ ಬೆಂಗಳೂರಲ್ಲಿ ಒಂದು ಗ್ರಂಥಭಂಡಾರವನ್ನು ಸ್ಥಾಪಿಸಲು ಅವಶ್ಯಕವಾದ ಏರ್ಪಾಟುಗಳನ್ನು ಮಾಡಬೇಕೆಂತಲೂ, ಇದರ ವೆಚ್ಚವು ಮಹಾಸಭೆಯ ಫಂಡಿನಿಂದಲೇ ನಡಿಸಲ್ಪಡಬೇಕೆಂತಲೂ ಈ ಮಹಾಸಭೆಯು ನಿರ್ಧರಿಸುತ್ತದೆ.

೬. ದಿವಾನ ಬಹಾದ್ದೂರ ಕೆ. ಪಿ. ಪುಟ್ಟಣಶೆಟ್ಟರು, ಸಿ. ಐ. ಇ., ಇವರು ವೀರಶೈವರ ಮತತತ್ವಗಳನ್ನೂ, ಚರಿತ್ರೆಯನ್ನೂ, ಧರ್ಮಗ್ರಂಥಗಳನ್ನೂ ಇಂಗ್ಲೀಷಭಾಷೆಯಲ್ಲಿ ಬರೆಯಿಸಿಯೂ ಪರಿವರ್ತಿಸಿಯೂ ಮತ್ತು ಶ್ರೀಕರಭಾಷ್ಯವನ್ನು ದೇವನಾಗರಿ ಲಿಪಿಯಲ್ಲಿ ಬರೆಯಿಸಿಯೂ ಆದಷ್ಟು ಜಾಗ್ರತೆ ಪ್ರಕಟಿಸಲು

ಈ ಮಹಾಸಭೆಯು ಅವರಿಗೆ ವಹಿಸಿದೆ. ಮತ್ತು ಇದಕ್ಕೆ ಅವಶ್ಯಕವಾಗಿ ಬೇಕಾಗುವಷ್ಟು ದ್ರವ್ಯವು ಅವರ ವಶಕ್ಕೆ ಕೊಡಲ್ಪಡತಕ್ಕದ್ದು.

೭. ಶ್ರೀಮದ್ವೀರಶೈವ ಮಹಾಸಭಾ ಚಿರಸ್ಥಾಯಿ ಫಂಡಿನ ವ್ಯವಸ್ಥೆಗೋಸ್ಕರ ದಿವಾನ ಬಹಾದ್ದೂರ ಕೆ. ಪಿ. ಪುಟ್ಟಣಶೆಟ್ಟರು, ಸಿ. ಐ. ಇ., ಇವರ ಅಧ್ಯಕ್ಷತೆಯಲ್ಲಿ ಈ ಫಂಡಿಗೆ ಒಂದು ಸಹಸ್ರ ರೂ. ಗಳಿಗಿಂತಲೂ ಹೆಚ್ಚಿಗೆ ಚಂದಾ ಕೊಟ್ಟಿರತಕ್ಕ ಜನಗಳಿಂದ ಕೂಡಿದ ಒಂದು ತಾತ್ಕಾಲಿಕ ಸಂಘವನ್ನು ಏರ್ಪಡಿಸಲು ಈ ಸಭೆಯು ನಿರ್ಧರಿಸುತ್ತದೆ. ಈ ಸಂಘವು ಮಹಾಸಭೆಯ ಸ್ಥಿರತೆಗೋಸ್ಕರ ಯುಕ್ತವಾದ ನಿಬಂಧನೆಗಳನ್ನು ಸಿದ್ಧಗೊಳಿಸಿ ಮುಂದಣ ಮಹಾಸಭೆಯಲ್ಲಿಡುವದಕ್ಕೂ, ಈ ಫಂಡಿಗೆ ಯಾವ ವೀರಶೈವರಿಂದಲೇ ಆಗಲಿ, ಒಂದು ಸಾವಿರ ರೂ. ಗಳಿಗಿಂತಲೂ ಕಡಿಮೆಯಿಲ್ಲದಷ್ಟು ಹಣವನ್ನು ಸ್ವೀಕರಿಸುವದಕ್ಕೂ, ಈಗ ವಾಗ್ದಾನಮಾಡಿರುವವರಲ್ಲಿ ಹಣವನ್ನು ಕೊಡದೆ ಇರುವದರಿಂದ ಬರಮಾಡಿಕೊಳ್ಳಲು ಅವಶ್ಯಕವಾದ ಏರ್ಪಾಟುಗಳನ್ನು ಮಾಡುವದಕ್ಕೂ, ಈ ಕಾರ್ಯಗಳಿಗೆ ಬೇಕಾಗುವ ವೆಚ್ಚವನ್ನು ಅಧ್ಯಕ್ಷರ ಅನುಮತಿಯಿಂದ ಮಾಡುವದಕ್ಕೂ, ಮ|| ಹುಬ್ಬಳ್ಳಿ ಶಿವಪ್ಪ, ಸಿದ್ಧರಾಮಪ್ಪ ಕುಸುಗಲ್ಲ ಇವರು ಉದಾರ ಬುದ್ಧಿಯಿಂದ ಇದರ ವೆಚ್ಚಕ್ಕೋಸ್ಕರ ಕೊಡುವ ಹಣವನ್ನು ಅಂಗೀಕರಿಸುವದಕ್ಕೂ, ಫಂಡಿನ ವ್ಯವಸ್ಥೆಗಾಗಿ ಬೇಕಾಗುವ ನಿಬಂಧನೆಗಳನ್ನು ಮಾಡಿ ಮುಂದಣ ಮಹಾಸಭೆಯಲ್ಲಿಡುವದಕ್ಕೂ, ಮತ್ತು ಈ ತಾತ್ಕಾಲಿಕ ಸಂಘವನ್ನು ಬೇಕಾದ ಸ್ಥಳದಲ್ಲಿ ಬೇಕಾದಾಗ ಕೂಡಿಸುವದಕ್ಕೂ, ಈ ಸಂಘವು ಈ ಮಹಾಸಭೆಯಿಂದ ಅಧಿಕಾರವನ್ನು ಹೊಂದಿರುತ್ತದೆ.

೮. ಮಹಾಸಭಾ ಚಿರಸ್ಥಾಯಿ ಫಂಡಿಗೆ ಈಗ ಕೂಡಿರುವ ಮತ್ತು ಇನ್ನು ಮುಂದೆ ಕೂಡುವ ಹಣವನ್ನು ತಾತ್ಕಾಲಿಕ ಸಂಘದ ಅಧ್ಯಕ್ಷರ ಹೆಸರಿನಲ್ಲಿ ಮೈಸೂರು ಬ್ಯಾಂಕಿನಲ್ಲಿ "ಫಿಕ್ಸೆಡ್ ಡಿಪಾಜಿಟ್ಟಾಗಿ" ಒಂದು ವರ್ಷದ ಮುಟ್ಟಿಗೆ ಇಡಬೇಕೆಂದು ಈ ಮಹಾಸಭೆಯು ನಿರ್ಣಯಿಸುತ್ತದೆ.

೯. ಗುರುವರ್ಗದವರಲ್ಲಿ ವಿದ್ಯಾಭಿರುಚಿಯನ್ನು ಹುಟ್ಟಿಸಿ ಅಭಿವೃದ್ಧಿಗೊಳಿಸತಕ್ಕ ಎರ್ಪಾಟುಗಳನ್ನು ಮಾಡಬೇಕೆಂಬುದು ಈ ಮಹಾಸಭೆಯ ದೃಢವಾದ ಅಭಿಪ್ರಾಯವಾಗಿದೆ. ಮತ್ತು ಜನಸಾಮಾನ್ಯದಲ್ಲಿ ಜ್ಞಾನಪ್ರಸಾರವಾಗುವುದಕ್ಕೋಸ್ಕರ ವೀರಶೈವ ಶಿಕ್ಷಕರ ಸಂಸ್ಥೆಗಳನ್ನು ಸ್ಥಾಪಿಸಲು ತಮ್ಮ ಆದಾಯದಲ್ಲಿ ಕೆಲವಂಶವನ್ನು ವಿನಿಯೋಗಿಸಬೇಕೆಂದು ಮುಖ್ಯ ಗುರುಪೀಠಾಧಿಪತಿಗಳನ್ನು ಈ ಸಭೆಯು ವಿನಯಪೂರ್ವಕವಾಗಿ ಪ್ರಾರ್ಥಿಸಿಕೊಳ್ಳುತ್ತದೆ.

೧೦. ಈ ಮಹಾಸಭೆಯು, ಅನೇಕ ಮಠಗಳ ಈಗಿನ ದುಸ್ಥಿತಿಗಾಗಿ ವಿಷಾದಪಡುವುದಲ್ಲದೆ ಈ ಮಠಗಳಿಗೆ ಉತ್ತರಾಧಿಕಾರಿಗಳನ್ನು ನಿಯಮಿಸುವ ವಿಷಯದಲ್ಲಿಯೂ, ಇವುಗಳು ಮಠವಿದ್ಯೆಯನ್ನು ಬೋಧಿಸುವ ಪೀಠಗಳಾಗಿ ಪರಿಣಮಿಸುವಂತೆಯೂ, ಮಠೀಯರ ಅಭಿವೃದ್ಧಿಗಾಗಿ ತಮ್ಮ ಶಕ್ತಿಯನ್ನು ಉಪಯೋಗಿಸುವಂತೆ ಮಾಡುವುದಕ್ಕಾಗಿ ಜನರಲ್ಲಿ ಬಲವಾದ ಮತ್ತು ಯೋಗ್ಯವಾದ ಆಸೆಯನ್ನು ಹುಟ್ಟಿಸುವುದು ಅತ್ಯಾವಶ್ಯಕವೆಂದು ಭಾವಿಸುತ್ತದೆ.

೧೧. ಮೈಸೂರು ಸ್ಟಾರ್ ಮತ್ತು ಚಂದ್ರೋದಯ ಪತ್ರಿಕೆಗಳು ನಮ್ಮ ಸಮಾಜಕ್ಕೆ ಉಪಯೋಗವಾದ ಸೇವೆಯನ್ನು ಮಾಡುತ್ತಿವೆಯೆಂತಲೂ, ಇವು ಜನರಿಂದ ಹೆಚ್ಚಾದ ಪ್ರೋತ್ಸಾಹವನ್ನು ಹೊಂದಲು ಅರ್ಹತೆಯುಳ್ಳವುಗಳಾಗಿವೆಯೆಂತಲೂ ಈ ಮಹಾಸಭೆಯು ಅಭಿಪ್ರಾಯಪಡುತ್ತದೆ.

೧೨. ಮಾ|| ಪತ್ರೆ ವೀರಪ್ಪನವರು ಮುಂದಣ ಮಹಾಸಭೆಯನ್ನು ಬೀರೂರಿನಲ್ಲಿ ೧೯೧೮ ನೇ ಡಿಶಂಬರ ತಿಂಗಳ ಕೊನೆಯ ವಾರದಲ್ಲಿ ಕೂಡಿಸಲು ಕೇಳಿಕೊಂಡಿರುವುದನ್ನು ಈ ಮಹಾಸಭೆಯು ಸದ್ಯಕ್ಕೆ ಅನುಮೋದಿಸಿರುತ್ತದೆ.

## ೯ನೆಯ ಸಭೆ [೧೯೧೯]—ಬೀರೂರ.

ಚಂದ್ರೋದಯ, ಸೋಮವಾರ ತಾ|| ೫—೧—೧೯೨೦

'ಸಭೆಯಲ್ಲಿ (೧) ಹಿಂದುಸ್ಥಾನಕ್ಕೆ ರಾಜಕೀಯ ಸುಧಾರಣೆಗಳು ಸಿಕ್ಕಿದ್ದರಿಂದ ಮಿ|| ಮಾಂಟೆಗ್ಯೂ ಇವರನ್ನು ಅಭಿನಂದನ ಮಾಡುವಬಗ್ಗೆ, (೨)ಶುಭೋದಯ ಪ್ರಕರಣದಲ್ಲಿ ಮುಂಬಯಿ ಸರಕಾರದ ಕಡೆಗೆ ಡೆಪ್ಯೂಟೇಶನ್ ಕಳಿಸುವ ಬಗ್ಗೆ, (೩) ಶಿರಸಂಗೀಕರ ಫಂಡಿನ ಟ್ರಸ್ಟೀಜನರಿಗೆ ಅಭಿನಂದನ ಮಾಡುವ ಬಗ್ಗೆ (೪) ಜಾತಿಯ ಒಳಭೇದಗಳನ್ನು ಪಂಗಡಗಳನ್ನು ತೆಗೆದು ಹಾಕುವ ಬಗ್ಗೆ ಮುಂತಾದ ಕೆಲವು ಠರಾವುಗಳು ಪಾಸಾದವು.

## ೧೦ನೆಯ ಸಭೆ [೧೯೨೭]—ಬೆಂಗಳೂರ.

೧. ವೀರಶೈವ ಸಮಾಜದ ಏಳ್ಗೆಗಾಗಿ ಸಹಾಯ ಮಾಡಿದ ಕಬ್ಬಳ್ಳಿ ಚನ್ನಬಸಪ್ಪನವರು, ಬೀರೂರು ಪತ್ರೆ ವೀರಪ್ಪನವರು, ಬೆಟ್ಟದಪುರದ ಶ್ರೀ ಚಿಕ್ಕವೀರ ದೇಶಿಕೇಂದ್ರ ಸ್ವಾಮಿಗಳು, ಯಾದಗಿರಿ ಧರ್ಮವೀರ ಶಂಕರಣ್ಣನವರು, ದಕ್ಷಿಣ

ಇಂಡಿಯಾದಲ್ಲಿ ಸುಪ್ರಸಿದ್ಧರಾಗಿದ್ದ ಆಸ್ಥಾನ ಸಂಗೀತ ವಿದ್ವಾನ್ ಬಿ. ರಾಚಪ್ಪನವರು ಮತ್ತು ಬೆಂಗಳೂರ ಯಜಮಾನ್ ಬಸಪ್ಪನವರು ಶಿವೈಕ್ಯರಾದುದರಿಂದ ಈ ಮಹಾಸಭೆಯು ದುಃಖಪ್ರದರ್ಶನ ಮಾಡುತ್ತದೆ. ಹಾಗೂ ಅವರ ಕುಟುಂಬಗಳಿಗೆ ಅನುತಾಪವನ್ನು ಸೂಚಿಸುತ್ತದೆ

೨. ಈ ಮಹಾಸಭೆಯ ವಿಷಯನಿಯಾಮಕ ಕಮಿಟಿಯಲ್ಲಿ ಎಲ್ಲ ಪ್ರಾಂತಗಳ ಪ್ರತಿನಿಧಿಗಳು ಜನಸಂಖ್ಯಾನುಗುಣವಾಗಿರುವುದು ಅವಶ್ಯಕವಾದುದರಿಂದ,

| | | | |
|---|---|---|---|
| ಬೊಂಬಾಯಿ ಆಧಿಪತ್ಯಕ್ಕೆ | ೩೫ | ನೈಜಾಂ ಸಂಸ್ಥಾನಕ್ಕೆ | ೧೨ |
| ಮೈಸೂರ ಸಂಸ್ಥಾನಕ್ಕೆ | ೩೫ | ಮರಾಠಾ ಸಂಸ್ಥಾನಗಳಿಗೆ | ೪ |
| ಮದ್ರಾಸ ಆಧಿಪತ್ಯಕ್ಕೆ | ೧೫ | ಮಹಾರಾಷ್ಟ್ರಕ್ಕೆ | ೧ |

ಈ ಪ್ರಕಾರವಾಗಿ ೧೦೨ ಮೆಂಬರುಗಳು ಇರತಕ್ಕದ್ದು. ಮತ್ತು ಆರು ಜನರನ್ನು ಹೆಚ್ಚಾಗಿ ನಿಯಮಿಸುವ ಆಧಿಕಾರವು ಅಧ್ಯಕ್ಷರಿಗಿರತಕ್ಕದ್ದು. ಈ ಮೇಲೆ ಕಾಣಿಸಿದಂತೆ ೧೦೮ ಸಭಾಸದರು ಈ ವಿಷಯನಿಯಾಮಕ ಕಮೀಟಿಯಲ್ಲಿ ಇರಬೇಕೆಂದೂ ಮಹಾಸಭಾಧ್ಯಕ್ಷರೇ ಈ ಕಮೀಟಿಯ ಅಧ್ಯಕ್ಷರಾಗಿರತಕ್ಕುದೆಂದೂ ಈ ಸಭೆಯು ನಿರ್ಧರಿಸುತ್ತದೆ.

೩. ಮದ್ರಾಸು, ಮತ್ತು ಬೊಂಬಾಯಿ ಆಧಿಪತ್ಯಗಳಲ್ಲಿಯೂ ಕೊಡಗು ಪ್ರಾಂತದಲ್ಲಿಯೂ, ಹಿಂದುಸ್ಥಾನದ ದೇಶೀಯ ಸಂಸ್ಥಾನಗಳಲ್ಲಿಯೂ ಅರ್ಹರಾದ ವೀರಶೈವರಿಗೆ ಆಯಾಯ ಸರಕಾರದವರು ಹೆಚ್ಚು ಹೆಚ್ಚು ಅಧಿಕಾರಸ್ಥಳಗಳನ್ನು ಕೊಡುವಂತೆ ಈ ಮಹಾಸಭೆಯು ಆಯಾಯ ಸರಕಾರಗಳಿಗೆ ವಿನಂತಿ ಮಾಡಿಕೊಳ್ಳುತ್ತದೆ.

೪. ವೀರಶೈವ ಸಮಾಜದ ಬಾಲಕರಿಗೆ ಮತ್ತು ಬಾಲಿಕೆಯರಿಗೆ ಪ್ರಾಥಮಿಕ ವಿದ್ಯಾಭ್ಯಾಸವನ್ನು ಬಲತ್ಕಾರದಿಂದ ಮಾಡಿಸಬೇಕೆಂತಲೂ ಮತ್ತು ಅವರ ಪ್ರೌಢ ವಿದ್ಯಾಭ್ಯಾಸಕ್ಕೆ ಸಮಾಜವು ಪೂರ್ಣ ಪ್ರೋತ್ಸಾಹವನ್ನು ಕೊಡಬೇಕೆಂತಲೂ ಈ ಮಹಾಸಭೆಯು ನಿರ್ಧರಿಸುತ್ತದೆ.

೫. ವೀರಶೈವರಲ್ಲಿ ಸಂಸ್ಕೃತ ಹಾಗೂ ವೈದಿಕ ವಿದ್ಯಾಭ್ಯಾಸಕ್ಕೆ ಉತ್ತೇಜನವನ್ನು ಕೊಡಬೇಕೆಂದು ಈ ಮಹಾಸಭೆಯು ನಿರ್ಧರಿಸುತ್ತದೆ.

೬. (ಅ) ವಿದೇಶಗಳಲ್ಲಿ ಪ್ರೌಢ ವಿದ್ಯಾಭ್ಯಾಸ ಮಾಡತಕ್ಕ ವೀರಶೈವ ತರುಣರಿಗೆ ತಕ್ಕ ಪ್ರೋತ್ಸಾಹವನ್ನು ಕೊಡಬೇಕೆಂದು ಈ ಮಹಾಸಭೆಯು ನಿರ್ಧರಿಸುತ್ತದೆ.

(ಬ) ವಿದ್ಯಾಭ್ಯಾಸಕ್ಕಾಗಿ ಪರದೇಶಗಳಿಗೆ ಹೋಗಲು ವೀರಶೈವರಿಗೆ ಇದುವರೆಗೂ ಒಂದು ವೇತನವನ್ನಾದರೂ ( Foreign Scholarship ) ಕೊಡದೆಯು ಮತ್ತು ತಮ್ಮ ಸ್ವಂತ ವೆಚ್ಚದಿಂದಲೇ ಪರದೇಶಗಳಿಗೆ ಹೋಗಿ ಉತ್ತಮತರಗತಿಯಲ್ಲಿ ದೊಡ್ಡ ದೊಡ್ಡ ಪರೀಕ್ಷೆಗಳನ್ನು ಕೊಟ್ಟು ಪ್ರಶಸ್ತಿಗಳನ್ನು ಪಡೆದುಬಂದಿರುವ ವೀರಶೈವರು ಮೈಸೂರ ವಿದ್ಯಾನಿಲಯವೇ ಮೊದಲಾದ ಸಂಸ್ಥೆಗಳಲ್ಲಿನ ದೊಡ್ಡ ಅಧಿಕಾರಿಗಳಿಗೆ ಪೂರ್ಣ ಅರ್ಹರಾಗಿದ್ದರೂ ಆಗಾಗ ಖಾಲಿ ಬೀಳುತ್ತಿರುವ ಪ್ರೊಫೆಸರ ಮೊದಲಾದ ಕೆಲಸಗಳಿಗೆ ಅವರನ್ನು ತೆಗೆದುಕೊಳ್ಳುವದರ ಮೂಲಕ ಮೈಸೂರ ಸರಕಾರದವರು ವೀರಶೈವ ಜನಾಂಗಕ್ಕೆ ತಕ್ಕ ಉತ್ತೇಜನವನ್ನು ಕೊಡದೆಯು ಇರುವದರಿಂದ ಇನ್ನು ಮೇಲಾದರೂ ಸರಕಾರದವರು ವೀರಶೈವರಿಗುಂಟಾಗಿರುವ ಈ ಕೊರತೆಯನ್ನು ತಪ್ಪಿಸಿ ಅವರ ಜನಸಂಖ್ಯೆಗೂ, ಪ್ರಾಮುಖ್ಯತೆಗೂ ತಕ್ಕ ರೀತಿಯಲ್ಲಿ ಉತ್ತೇಜನ ಕೊಡಬೇಕೆಂದು ಈ ಮಹಾಸಭೆಯು ಮೈಸೂರ ಸರಕಾರದವರಿಗೆ ವಿನಂತಿ ಮಾಡಿಕೊಳ್ಳುತ್ತದೆ.

೭. ವೀರಶೈವ ಮತ ಹಾಗೂ ಧಾರ್ಮಿಕಸಂಬಂಧವಾದ ಪ್ರಾಚೀನ ಮತ್ತು ಅರ್ವಾಚೀನ ಗ್ರಂಥಗಳ ಒಂದು ಮುಖ್ಯ ಪುಸ್ತಕ ಭಂಡಾರವನ್ನು ಈ ಮಹಾಸಭೆಯ ವತಿಯಿಂದ ವಿಜಾಪುರದಲ್ಲಿ ಸ್ಥಾಪಿಸತಕ್ಕದೆಂದು ಈ ಮಹಾಸಭೆಯು ನಿರ್ಧರಿಸುತ್ತದೆ.

೮. ಪ್ರತಿ ಪ್ರಾಂತದಲ್ಲೂ ಒಂದೊಂದು ವೀರಶೈವ ವಿದ್ಯಾವರ್ಧಕ ಧನನಿಧಿಯನ್ನು ಸ್ಥಾಪಿಸಬೇಕೆಂದು ಆಯಾಯ ಪ್ರಾಂತದ ವೀರಶೈವ ಪ್ರಮುಖ ಸದ್‌ಗೃಹಸ್ಥರಿಗೆ ಈ ಮಹಾಸಭೆಯು ಸೂಚಿಸುತ್ತದೆ.

೯. (ಅ) ಬ್ರಿಟಿಶ ಕರ್ನಾಟಕದ ಏಕೀಕರಣದ ದೆಸೆಯಿಂದ ವೀರಶೈವ ಸಮಾಜವು ಒಮ್ಮನಸ್ಸಿನಿಂದ ಪ್ರಯತ್ನಿಸಬೇಕೆಂದು ಈ ಮಹಾಸಭೆಯು ನಿರ್ಧರಿಸುತ್ತದೆ.

(ಬ) ಕರ್ನಾಟಕಕ್ಕೆ ಒಂದು ಪ್ರತ್ಯೇಕವಾದ ಅಥವಾ ಸ್ವತಂತ್ರವಾದ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸುವದು ಅವಶ್ಯವಿರುತ್ತದೆಂದು ಈ ಸಭೆಯು ನಿರ್ಧರಿಸುತ್ತದೆ.

(ಕ) ಕರ್ನಾಟಕದ ಲಿಂಗಾಯತ ಎಜ್ಯುಕೇಶನ್ ಸೊಸಾಯಿಟಿ ಬೆಳಗಾವಿ ಇವರು ಕರ್ನಾಟಕದಲ್ಲಿ ಶಿಕ್ಷಣ ಪ್ರಚಾರ ಮಾಡುತ್ತಿರುವ ಕಾರ್ಯವು ಅಭಿನಂದನೀಯುವಾಗಿರುವುದಲ್ಲದೆ ಈಗ ಇವರು ಬೆಳಗಾಂವಿಯಲ್ಲಿ ಒಂದು ಆರ್ಟ್ಸ ಕಾಲೇಜ (ಉಚ್ಚ ಶಿಕ್ಷಣದ ವಿದ್ಯಾಲಯವ) ನ್ನು ಸ್ಥಾಪಿಸಲು ನಡೆಸಿದ ಪ್ರಯತ್ನವು ಸ್ತುತ್ಯವಿರುತ್ತದೆ. ಆದ ಕಾರಣ ಅಖಿಲ ಭಾರತೀಯ ವೀರಶೈವರು ಈ ಕಾರ್ಯಕ್ಕೆ ಸಹಾಯ ಮಾಡಬೇಕೆಂದು ಈ ಮಹಾಸಭೆಯು ನಿರ್ಧರಿಸುತ್ತದೆ ಮತ್ತು ಮುಂಬಯಿ ಸರಕಾರದವರು ಇದಕ್ಕೆ ಪೂರ್ಣ ಉತ್ತೇಜನವನ್ನು ಕೊಡಬೇಕೆಂದು ಈ ಸಭೆಯು ವಿನಂತಿ ಮಾಡುತ್ತದೆ.

೧೦ ವೀರಶೈವರಲ್ಲಿ ಬಾಲ್ಯವಿವಾಹವನ್ನು ನಿರೋಧಿಸಬೇಕೆಂದು ಈ ಮಹಾಸಭೆಯು ನಿರ್ಧರಿಸುತ್ತದೆ,

೧೧. ವೀರಶೈವ ಸಮಾಜದಲ್ಲಿ ಬಾಲವಿತಂತು ವಿವಾಹವನ್ನು ರೂಢಿಗೆ ತರಬೇಕೆಂದು ಈ ಮಹಾಸಭೆಯು ನಿರ್ಧರಿಸುತ್ತದೆ.

೧೨. ಹಿಂದುಸ್ಥಾನದ ಸಾಂಪತ್ತಿಕ ಸ್ಥಿತಿಯನ್ನು ಸುಧಾರಿಸಲಿಕ್ಕೂ, ನಮ್ಮ ದೇಶೀಯ ಉದ್ಯೋಗಕ್ಕೆ ಉತ್ತೇಜನ ಕೊಡಲಿಕ್ಕೂ ಖಾದಿ ಪ್ರಸಾರಣೆಯು ಅತ್ಯವಶ್ಯವಾಗಿರುವದರಿಂದ ವೀರಶೈವ ಸಮಾಜದ ಪ್ರತಿವ್ಯಕ್ತಿಯೂ ಖಾದಿ ವಸ್ತ್ರಕ್ಕೆ ಪ್ರೋತ್ಸಾಹವನ್ನು ಕೊಡಬೇಕೆಂದು ಈ ಮಹಾಸಭೆಯು ನಿರ್ಧರಿಸುತ್ತದೆ.

೧೩. ದೇಹಲಿ ಲೇಜಿಸ್ಲೇಟಿವ್ಹ ಆಸೆಂಬ್ಲಿಯಲ್ಲಿ ಡಾ॥ ಹರಿಸಿಂಗ ಘೋರ ಇವರು ಸೂಚಿಸಬೇಕೆಂದಿರುವ ಒಪ್ಪಿಗೆಯ ವಯಸ್ಸಿನ ಬಿಲ್ಲ (Age of Consent Bill) ನ ತತ್ವವು ಮತ್ತು ಈ ಮಹಾಸಭೆಯಲ್ಲಿ ಅಂಗೀಕೃತವಾದ ಬಾಲ್ಯವಿವಾಹನಿರೋಧದ ಗೊತ್ತುವಳಿಯ ತತ್ವವು ಸಮಾನವಾಗಿರುವದರಿಂದ ಈ ಮಹಾಸಭೆಯು ಈ ಒಪ್ಪಿಗೆಯ ವಯಸ್ಸಿನ ಬಿಲ್ಲನ್ನು ಸಂಪೂರ್ಣವಾಗಿ ಅನುಮೋದಿಸುವದಾಗಿ ನಿರ್ಧರಿಸುತ್ತದೆ.

೧೪. ಕರ್ನಾಟಕದಲ್ಲಿ ವ್ಯಾಪಾರ, ಕೈಗಾರಿಕೆಗಳ ಅಭಿವೃದ್ಧಿಗೆ ಸ್ವತಂತ್ರ ಬಂದರುಗಳು ಅತ್ಯವಶ್ಯವಾಗಿರುವದರಿಂದ ಭಟಕಳ ಮತ್ತು ಕಾರವಾರಗಳಲ್ಲಿ ಬಂದರುಗಳನ್ನು ನಿರ್ಮಾಣಮಾಡಿಕೊಡಬೇಕೆಂದು ಮುಂಬಯಿ ಮತ್ತು ಮೈಸೂರು ಸರಕಾರಗಳಿಗೆ ಈ ಮಹಾಸಭೆಯು ವಿನಂತಿ ಮಾಡಿಕೊಳ್ಳುತ್ತದೆ.

೧೫. ಅನೇಕ ವೀರಶೈವ ಧಾರ್ಮಿಕ ಪ್ರಾಚೀನ ಗ್ರಂಥಗಳನ್ನು ಅತ್ಯಂತ ಶ್ರಮವಹಿಸಿ ಅವನ್ನು ಮುದ್ರಣಗೊಳಿಸಿ ಧರ್ಮಪ್ರಸಾರಣೆಯ ಕಾರ್ಯವನ್ನು ಮಾಡುತ್ತ ಶಿವಾನುಭವವೆಂಬ ತ್ರೈಮಾಸಿಕ ಪತ್ರಿಕೆಯನ್ನು ಹೊರಡಿಸಿ ತನ್ಮೂಲಕ ಸಮಾಜಸೇವೆಯನ್ನೂ, ಧರ್ಮಸಂರಕ್ಷಣೆಯನ್ನೂ ಕರ್ನಾಟಕ

ಭಾಷೆಯ ಅಭಿವೃದ್ಧಿಯನ್ನೂ ಮಾಡುತ್ತಿರುವ ರಾ|| ಸಾ|| ಫಿ. ಜಿ. ಹಳಕಟ್ಟಿ ಬಿ ಏ., ಎಲಲ್. ಬಿ , ಯವರನ್ನು ಈ ಮಹಾಸಭೆಯು ಅಭಿನಂದನ ಮಾಡುತ್ತದೆ.

೧೬. ನಮ್ಮ ಸಮಾಜದಲ್ಲಿರತಕ್ಕ ಒಳಪಂಗಡಗಳು ಸಮಾಜದ ಐಕ್ಯ ಮತ್ತೈಕ್ಯೂ ಏಳ್ಗೆಗೂ ಅಡ್ಡಿಯಾಗಿರುವದರಿಂದ ಅವುಗಳ ಏಕೀಕರಣಕ್ಕಾಗಿ ಪ್ರಯತ್ನಿಸುವದು ಅವಶ್ಯವೆಂದು ಈ ಮಹಾಸಭೆಯು ನಿರ್ಧರಿಸುತ್ತದೆ.

೧೭. ಶಿರಸಂಗಿ ದೇಸಾಯರ ಫಂಡಿನ ಟ್ರಸ್ಟಿಗಳು ಇಡೀ ವೀರಶೈವ ಸಮಾಜಕ್ಕೆ ಸದರಿ ಫಂಡಿನ ಉತ್ಪನ್ನವನ್ನು ವಿನಿಯೋಗಿಸಬೇಕೆಂದು ಆ ಫಂಡಿನ ಟ್ರಸ್ಟಿಗಳಿಗೆ ವಿನಂತಿ ಮಾಡಿಕೊಳ್ಳತಕ್ಕದೆಂದು ಈ ಮಹಾಸಭೆಯು ನಿರ್ಧರಿಸುತ್ತದೆ.

೧೮. ವೀರಶೈವ ಸಮಾಜದ ಆರ್ಥಿಕಾಭಿವೃದ್ಧಿಗೆ ಅವಶ್ಯವಾಗಿರುವ ವ್ಯವಸಾಯ, ವಾಣಿಜ್ಯ, ಮತ್ತು ಕೈಗಾರಿಕೆಗಳಿಗೆ ಸಮಾಜವು ಹೆಚ್ಚು ಗಮನ ಮತ್ತು ಪ್ರೋತ್ಸಾಹವನ್ನು ಕೊಡಬೇಕೆಂದು ಈ ಮಹಾಸಭೆಯು ನಿರ್ಧರಿಸುತ್ತದೆ.

೧೯. ಗೋವು ಮತ್ತು ಬಸವಗಳನ್ನು ವಧೆ ಮಾಡುವದು, ಹಿಂದು ಧಾರ್ಮಿಕ ತತ್ವಕ್ಕೆ ತುಂಬಾ ವಿರುದ್ಧವಿರುವದರಿಂದಲೂ, ನಮ್ಮ ಆರ್ಥಿಕ ಸಂಪತ್ತಿಗೆ ಕೇಡು ಮಾಡುವದರಿಂದಲೂ ಅವುಗಳ ವಧೆಯನ್ನು ನಿರೋಧಪಡಿಸುವ ಬಗ್ಗೆ ಶಾಸನ ಮಾಡಲಿಕ್ಕಾಗಿ ಸರಕಾರಕ್ಕೆ ವಿನಂತಿ ಮಾಡಬೇಕೆಂದು ಮತ್ತು ಆವುಗಳ ಪೋಷಣೆಗೆ ತಕ್ಕ ಏರ್ಪಾಡನ್ನು ಸಮಾಜವು ಮಾಡತಕ್ಕದ್ದೆಂದು ಈ ಮಹಾಸಭೆಯು ನಿರ್ಧರಿಸುತ್ತದೆ.

೨೦. ಅಮೇರಿಕೆಯ. ಮಿಸ್. ಮೇಯೋ ಎಂಬ ಗ್ರಂಥಕರ್ತೆಯು "ಮದರ ಇಂಡಿಯಾ" ಎಂಬ ಪುಸ್ತಕದಲ್ಲಿ ಭಾರತೀಯರ ಹಾಗೂ ಭಾರತ ಸ್ತ್ರೀಯರ ವಿಷಯವಾಗಿ ಅಪಮಾನಕಾರಕ ಸುಳ್ಳು ಸಂಗತಿಗಳನ್ನು ಸೇರಿಸಿರುವದರಿಂದ ಆ ಪುಸ್ತಕವನ್ನು ಈ ಮಹಾಸಭೆಯು ಪೂರ್ಣ ಖಂಡಿಸುತ್ತದೆ.

೨೧. ವೀರಶೈವ ರಾಜಮನೆತನಗಳಲ್ಲಿ ಸುಪ್ರಸಿದ್ಧವಾದ ಕೆಳದಿ ರಾಜಮನೆತನದ ವಿಷಯವಾಗಿ ಬ್ರಿಟಿಶ ಸರಕಾರದಿಂದ ರಾಜಕೀಯ ಪೆನಶನ್ (Political pension) ಬಗ್ಗೆ ಈಗ ನರಗುಂದದಲ್ಲಿ ವಾಸಮಾಡುವ ಅವರ ವಂಶಜರು ಮಾಡುವ ಅರಿಕೆಯನ್ನು ನಾಮದಾರ ವ್ಹಾಯಿಸರಾಯರವರು ಮತ್ತು ಇಂಡಿಯಾ ಸರಕಾರದವರು ಸಹಾನುಭೂತಿಯಿಂದ ವಿಚಾರ ಮಾಡಿ ಸಹಾಯ ಮಾಡಬೇಕೆಂದು ಈ ಮಹಾಸಭೆಯು ವಿನಂತಿ ಮಾಡುತ್ತದೆ.

೨೨. ವೀರಶೈವ ಸಮಾಜದ ಏಳ್ಗೆಯ ಬಗ್ಗೆ ಒಂದು ದಿನಪತ್ರಿಕೆಯನ್ನು ಆರಂಭಮಾಡತಕ್ಕದೆಂದು ಮತ್ತು ಸದ್ಯದಲ್ಲಿ ಸಮಾಜದವರಿಂದ ನಡಿಸಲ್ಪಡು

ತ್ತಿರುವ ಪತ್ರಿಕೆಗಳಿಗೆ ಸಮಾಜವು ಪ್ರೋತ್ಸಾಹಕೊಡತಕ್ಕದೆಂದು ಈ ಸಭೆಯು ನಿರ್ಧರಿಸುತ್ತದೆ.

೨೩. ಮದ್ರಾಸು ಶಾಶನ ಸಭೆಯಲ್ಲಿ ವೀರಶೈವರು ಒಬ್ಬರಾದರೂ ಇಲ್ಲದಿರುವದಕ್ಕಾಗಿ ಈ ಮಹಾಸಭೆಯವರು ವಿಷಾದಿಸುವರಲ್ಲದೆ ಸದರಿ ಸಭೆಯಲ್ಲಿ ನಾಮಿನೇಷನ್ ಮೂಲಕ ವೀರಶೈವರಿಗೆ ಸರಿಯಾದ ಪ್ರಾತಿನಿಧ್ಯವನ್ನು ಕೊಡಬೇಕೆಂದು ಮದ್ರಾಸ ಇಲಾಖಾ ಸರಕಾರಕ್ಕೆ ಈ ಮಹಾಸಭೆಯು ವಿನಂತಿ ಮಾಡಿಕೊಳ್ಳುತ್ತದೆ.

೨೪. ಅಖಿಲ ವೀರಶೈವರಿಗೆ ಪವಿತ್ರಯಾತ್ರಾಸ್ಥಳವಾದ ತುಮಕೂರು ಡಿ|| ಯಡಿಯೂರು ಕ್ಷೇತ್ರದಲ್ಲಿರುವ ಶ್ರೀ ಸಿದ್ದಲಿಂಗೇಶ್ವರ ದೇವಸ್ಥಾನದ ಮತ್ತು ವೀರಶೈವರ ಯೋಗಿಂದ್ರರ ಗದ್ದುಗೆಯ ಮೇಲ್ವಿಚಾರಣೆಗೆ ಮೈಸೂರು ಸರಕಾರವು ವೀರಶೈವರಲ್ಲದ ಪಾರುಪತ್ತೆಗಾರರನ್ನು ನೇಮಕಮಾಡಿರುವುದರಿಂದ ಅಖಿಲ ವೀರಶೈವರಿಗೆ ವಿಷಾದವುಂಟಾಗಿರುವ ಪ್ರಯುಕ್ತ ಈ ಏರ್ಪಾಟನ್ನು ತಪ್ಪಿಸಿ ವೀರಶೈವ ಪಾರುಪತ್ತೆಗಾರರನ್ನು ನೇಮಕಮಾಡಬೇಕೆಂದು ಮೈಸೂರು ಸರಕಾರದವರಿಗೆ ಈ ಮಹಾಸಭೆಯು ವಿನಂತಿ ಮಾಡಿಕೊಳ್ಳುತ್ತದೆ.

೨೫. (ಅ) ತಾ|| ೨೨—೧೨—೧೯೨೭ ನೇ ಇಸ್ವಿ ದಿವಸ ಅಖಿಲ ಭಾರತ ವೀರಶೈವ ಮಹಾಸಭೆಯ ಸ್ವಾಗತ ಸಂಘಾಧ್ಯಕ್ಷರಾದ ಸರ್. ಕೆ. ಪಿ. ಪುಟ್ಟಣ್ಣ ಶೆಟ್ಟರು ಸ್ವಾಗತ ಸಂಘದ (Communique) ಎಂಬ ಪ್ರಕಟನದ್ವಾರಾ ೧೯೦೮ ನೇ ಇಸವಿಯಲ್ಲಿ ಬಾಗಲಕೋಟೆಯಲ್ಲಿ ಏರ್ಪಾಟಾಗಿದ್ದ ಸ್ಟ್ಯಾಂಡಿಂಗ್ ಕಮಿಟಿಯು ಬಹಳ ವರ್ಷಗಳ ಹಿಂದೆಯೇ ತನ್ನ ಕರ್ತವ್ಯವನ್ನು ಮಾಡುವುದನ್ನು ಬಿಟ್ಟದೆ ( ceased to function long ago ) ಎಂದು ಮೊದಲಾಗಿ ಪ್ರಸಿದ್ಧ ಮಾಡಿದುದು ಯೋಗ್ಯವೂ ವಾಸ್ತವ್ಯವೂ ಆದ ಸಂಗತಿ ಇರುತ್ತದೆಂದು ಈ ಮಹಾಸಭೆಯು ಸಮರ್ಥಿಸುತ್ತದಲ್ಲದೆ, ಬಹಳ ವರ್ಷಗಳಿಂದ ಮೇಲ್ಕಂಡ ಸ್ಟ್ಯಾಂಡಿಂಗ್ ಕಮೀಟಿಯು ಕಾಯಿದೇಶೀರ ಅಸ್ತಿತ್ವದಲ್ಲಿ ಅಥವಾ ಅಮಲಿನಲ್ಲಿ ಇರಲಿಲ್ಲವೆಂದೂ ಈಗಲೂ ಇಲ್ಲವೆಂದೂ ( has been and is defunct and has no legal existence ) ಈ ಮಹಾಸಭೆಯ ಸ್ಪಷ್ಟವಾದ ಮತ್ತು ಬಲವತ್ತರವಾದ ಅಭಿಪ್ರಾಯವಾಗಿದೆ.

(ಬ) ಹುಬ್ಬಳ್ಳಿ ಲಿಂಗಾಯತ ವಿದ್ಯಾವರ್ಧಕ ಸಂಘದಿಂದ ಪ್ರಕಟವಾಗಿರುವ ಅಖಿಲವೀರಶೈವ ಮಹಾಸಭೆಯ ಘಟನೆಗೆ ಸಂಬಂಧಪಟ್ಟ ಸಲಹೆಗಳನ್ನು ವಿಚಾರಮಾಡುವದಕ್ಕೂ, ಎಲ್ಲ ಭಾಗದ ವೀರಶೈವರಿಂದ ಸೂಚನೆಗಳನ್ನು ತರಿಸಿಕೊಂಡು ಚೆನ್ನಾಗಿ ಪರ್ಯಾಲೋಚಿಸಿ ರಿಪೋರ್ಟು ಮಾಡುವದಕ್ಕೂ ಕೆಳಗೆ ಬರೆದ ಎಲ್ಲ ಪ್ರಾಂತಗಳ ಮಹನೀಯರಿಂದ ಕೂಡಿದ ಒಂದು ಕಮೀಟಿಯು ಇರಬೇಕು.

ಇದರ ಚೇರ್‌ಮನ್ನರಿಗೆ ಈ ಕಮೀಟಿಯನ್ನು ಕೂಡಿಸುವ ಮತ್ತು ಒಬ್ಬ ಸೆಕ್ರೆಟರಿಯನ್ನು ನೇಮಿಸುವ ಅಧಿಕಾರವಿರುತ್ತದೆ, ಕಮಿಟಿಯು ಇವರ ಅಪೇಕ್ಷೆ ಮೇರೆಗೆ ಸೇರತಕ್ಕದ್ದು, ಮತ್ತು ಕಮಿಟಿಯು ಮಾಡುವ ರೂಲ್ಸುಗಳು ಚಿರಸ್ಥಾಯಿ ಫಂಡಿನ ಸಂಬಂಧವಾದ ರೂಲ್ಸುಗಳನ್ನು ಒಳಗೊಂಡಿರತಕ್ಕದ್ದು. ಕಮೀಟಿಗೆ ಹೆಚ್ಚು ಜನರನ್ನು ಸೇರಿಸಲಿಕ್ಕೆ ಚೇರ್‌ಮನ್ನರಿಗೆ ಅಧಿಕಾರವಿರುತ್ತದೆ.

(ಕ) ಈ ಕಮಿಟಿಯವರು ಮಾಡಿದ ರಿಪೋರ್ಟನ್ನು ಪರಿಶೀಲಿಸಿ ಘಟನೆಯ ಬಗ್ಗೆ ಸಾಕಷ್ಟು ವಿಚಾರಮಾಡಿ ನಿರ್ಣಯಿಸಲಿಕ್ಕೆ ಸಾಧ್ಯವಾದರೆ ಒಂದು ಸ್ಪೇಷಲ್ ಕಾನ್‌ಫರನ್ಸನ್ನು ಇದೇ ಬೇಸಿಗೆ ಸೂಟಿಯಲ್ಲಿ ಕರೆಯಬೇಕೆಂದು ಈ ಮಹಾಸಭೆಯು ನಿರ್ಧರಿಸುತ್ತದೆ. ಸ್ಪೆಷಲ್ ಕಾನ್‌ಫರನ್ಸ ಆಗದಿದ್ದರೆ ಮುಂದಿನ ಮಹಾಸಭೆಯು ಸದರಿ ಕಮೀಟಿಯ ರಿಪೋರ್ಟನ್ನು ಪರ್‍ಯಾಲೋಚಿಸಿ ಆ ಸಭೆಯಲ್ಲಿಯ ಅಭಿಪ್ರಾಯದಂತೆ ನಿರ್ಣಯಿಸತಕ್ಕದ್ದು.

ಅಖಿಲಭಾರತ ವೀರಶೈವ ಮಹಾಸಭೆಯ ಚಿರಸ್ಥಾಯಿ ಫಂಡಿನ ಕಮೀಟಿಯವರು ವಿಧಿಸಿರುವ ನಿಯಮಗಳನ್ನು ( Rules ) ಕೆಳಗೆ ಬರೆದ ನಿಬಂಧನೆಗಳಿಗೆ ( Proviso ) ಒಳಪಟ್ಟು ಈ ಮಹಾಸಭೆಯು ಈಗ ಮಂಜೂರ್ ಮಾಡುತ್ತದೆ. ಅಂದರೆ ಮಹಾಸಭೆಯ ಘಟನೆಯ ವಿಚಾರವಾಗಿ ಏರ್ಪಟ್ಟಿರುವ ಕಮೀಟಿಯವರ ರಿಪೋರ್ಟಿನ ಮೇಲೆ ಮಹಾಸಭಾ ಘಟನೆಯು ಮುಂದಿನ ಮಹಾಸಭೆಯಿಂದ ನಿರ್ಣಯಿಸಲ್ಪಡುವವರೆಗೆ ಮೇಲ್ಕಂಡಂತೆ ಮಂಜೂರ್ ಮಾಡಲ್ಪಟ್ಟಿರುವ ರೂಲ್ಸುಗಳು ಜಾರಿಯಲ್ಲಿರತಕ್ಕುದೆಂದು ಈ ಮಹಾಸಭೆಯು ನಿರ್ಧರಿಸುತ್ತದೆ.

(ಡ) ಈ ಮಹಾಸಭೆಯ ಕಾರ್ಯವನ್ನು ನೆರವೇರಿಸುವುದಕ್ಕೂ ಅವಶ್ಯವಾಗಿರುವ ಇತರ ಕೆಲಸಗಳನ್ನು ಸಹ ಮಾಡುವುದಕ್ಕೂ ಈ ಕೆಳಗೆ ಕಂಡ ಸದ್ಗೃಹಸ್ಥರಿಂದ ಕೂಡಿದ ಒಂದು ಸ್ಟ್ಯಾಂಡಿಂಗ್ ಕಮೀಟಿಯು ಇರತಕ್ಕದೆಂತಲೂ ಮತ್ತು ಮುಂದಿನ ಮಹಾಸಭೆಗೆ ಈ ವಿಚಾರದಲ್ಲಿ ಸದರಿ ಕಮೀಟಿಯು ಒಂದು ವರದಿಯನ್ನು ತಯಾರುಮಾಡಿ ಒಪ್ಪಿಸತಕ್ಕದೆಂತಲೂ ಈ ಸಭೆಯು ನಿರ್ಧರಿಸುತ್ತದೆ.

( ೧ ) ಸರ್ ಕೆ. ಪಿ. ಪುಟ್ಟಣ ಸೆಟ್ಟರು, ಅಧ್ಯಕ್ಷರು.
( ೨ ) ಮ|| ಟಿ. ರಾಚಪ್ಪನವರು ಸೆಕ್ರೆಟರಿ.
( ೩ ) ಮ|| ಡಿ. ಎಚ್. ಚಂದ್ರಶೇಖರಯ್ಯ, ಬಿ. ಎ., ಬಿ. ಎಲ್;
( ೪ ) ಮ|| ಡಿ. ಎಸ್. ಮಲ್ಲಪ್ಪನವರು.

## ೧೧ನೇಯ ಸಭೆ ೧೯೩೩ ಧಾರವಾಡ

೧ ಅಸ್ಪೃಶ್ಯತಾ ನಿವಾರಣೆ ಹಾಗು ಮಹಾತ್ಮಾ ಗಾಂಧಿಯವರು ಅದಕ್ಕಾಗಿ ಉಪವಾಸ ವ್ರತವನ್ನು ಆಚರಿಸುತ್ತಿದ್ದದ್ದಕ್ಕಾಗಿ ಈ ಸಭೆಯು ಸಹಾನುಭೂತಿಯನ್ನು ವ್ಯಕ್ತಗೊಳಿಸುತ್ತದೆ.

೨ ವೀರಶೈವರು ಗ್ರಾಮಸುಧಾರಣೆಯ ಕಾರ್ಯವನ್ನು ಅವಶ್ಯವಾಗಿ ಮಾಡಬೇಕೆಂದು ಈ ಸಭೆಯು ನಿರ್ಧರಿಸುತ್ತದೆ.

೩ (ಅ) ಔದ್ಯೋಗಿಕ ಉನ್ನತಿಗಾಗಿ ವ್ಯವಹಾರಸ್ಥರು ಒಂದು ಮಂಡಳವನ್ನು ನೇಮಿಸಿ ಔದ್ಯೋಗಿಕ ಶಿಕ್ಷಣಾಲಯಗಳನ್ನು ಸ್ಥಾಪಿಸಬೇಕು.

(ಬ) ಸಾಂಪತ್ತಿಕ ಅಭಿವೃದ್ಧಿಗಾಗಿ ಔದ್ಯೋಗಿಕ ಶಾಲೆ ಕಾಲೇಜುಗಳ ಸಲುವಾಗಿ ಸರಕಾರದವರು ಹೆಚ್ಚು ಹಣವನ್ನು ಖರ್ಚುಮಾಡಬೇಕೆಂದು ಈ ಸಭೆಯು ಸರಕಾರಕ್ಕೆ ವಿನಂತಿ ಮಾಡಿಕೊಳ್ಳುತ್ತದೆ.

(ಕ) ಮುನಿಸಿಪಾಲಿಟಿ ಲೋಕಲ್ ಬೋರ್ಡ ಮೊದಲಾದ ಸ್ಥಾನಿಕ ಸಂಸ್ಥೆಗಳು ಈ ಔದ್ಯೋಗಿಕ ಶಿಕ್ಷಣಕ್ಕಾಗಿ ಹೆಚ್ಚು ಗಮನ ಕೊಡಬೇಕೆಂದು ಈ ಸಭೆಯು ವಿನಂತಿ ಮಾಡಿಕೊಳ್ಳುತ್ತದೆ.

೪ ಸರಕಾರದವರು ವೀರಶೈವರನ್ನು ಶೂದ್ರವರ್ಗದಲ್ಲಿ ಸೇರಿಸಿದ್ದಾರೆ. ವೀರಶೈವರು ಉಚ್ಚವರ್ಣದವರಿದ್ದು ಶೂದ್ರರಿಗೆ ಇರುವ ದರ್ಜೆ ಹಾಗು ಕಾಯಿದೆಗಳನ್ನು ನಮಗೆ ಹಚ್ಚುತ್ತಿರುವದರಿಂದ ನಮ್ಮ ಸಮಾಜಕ್ಕೆ ಹಾನಿಯಾಗಿದೆ. ಗ್ರಾಮಾಂತರಗಳಲ್ಲಿ ವ್ಯಾಜ್ಯಹುಟ್ಟಿ ಸಾಮಾಜಿಕ ಕೆಲಸಗಳು ಆಗುವದಿಲ್ಲ ಆ ವ್ಯಾಜ್ಯಗಳ ನಿರ್ಣಯಗಳು ಸರಿಯಾಗಿ ಹೊರಬೀಳುವದಿಲ್ಲ. ಅದಕ್ಕಾಗಿ ವೀರಶೈವರು ತಮಗೆ ಒಂದು ಆಧಾರ ಗ್ರಂಥವನ್ನು ಮಾಡಿಕೊಳ್ಳಬೇಕು. ಹಾಗು ಒಂದು ಮಂಡಳವನ್ನು ಮಾಡಿಕೊಳ್ಳಬೇಕು. ಅದರ ವತಿಯಿಂದ ಅಲ್ಲಲ್ಲಿಗೆ ಠರಾವುಗಳನ್ನು ಪಾಸಮಾಡಿ ಕಾಯಿದೆ ಮಾಡಿಸಿಕೊಳ್ಳಬೇಕು. ಬನವಾಸಿ ಖಟ್ಲೆಯ ಬಗ್ಗೆ ಮಾಡತಕ್ಕ ಕಾರ್ಯಗಳನ್ನು ಜರುಗಿಸಲು ಒಂದು ಸ್ಟ್ಯಾಂಡಿಂಗ ಕಮೀಟಿಯನ್ನು ನೇಮಿಸಿ ಅದಕ್ಕೆ ಅಧಿಕಾರ ಕೊಡಬೇಕು.

೫ ವೀರಶೈವ ಪ್ರಾಚೀನ ಗ್ರಂಥಗಳ ಸಂಶೋಧನೆ ಮಾಡುವದು, ನಮ್ಮ ಧರ್ಮದಲ್ಲಿ ಆಗಿಹೋದ ಮಹಾಪುರುಷರ ಇತಿಹಾಸ ಬರೆಯಿಸುವದು ಹಾಗು ಅವುಗಳನ್ನೆಲ್ಲ ಪ್ರಕಟಿಸುವದು.

೬ (ಅ) ಹೈದ್ರಾಬಾದ ಸಂಸ್ಥಾನದಲ್ಲಿ ಪರಳೀ ಪ್ರಕರ್ಣದಲ್ಲಿ ನಡೆದ ಲಿಂಗಾಯತ ಬ್ರಾಹ್ಮಣ ವ್ಯಾಜ್ಯದಲ್ಲಿ ನಿಜಾಮ ಸರಕಾರದವರು ಲಿಂಗಾಯತರಂತೆ ಯೋಗ್ಯ ನಿರ್ಣಯ ಕೊಟ್ಟದ್ದಕ್ಕಾಗಿ ಆ ಸರಕಾರವನ್ನು ಈ ಸಭೆಯು ಅಭಿನಂದಿಸುತ್ತದೆ.

(ಬ) ನಿಜಾಮ ಸಂಸ್ಥಾನಲ್ಲಿಯ ವಿದ್ಯಾರ್ಥಿಗಳಿಗೆ ಲಿಂಗಾಯತ ಫಂಡು ಕೊಡಬೇಕು.

(ಕ) ನಿಜಾಮ ರಾಜ್ಯದಲ್ಲಿ ಲಿಂಗಾಯತರಿಗೆ ಗ್ಯಾಝಿಟೆಡ್ ಅಧಿಕಾರಿ ಸ್ಥಳಗಳನ್ನು ಕೊಡಬೇಕು,

(ಡ) ಗುಲಬುರ್ಗಾದಲ್ಲಿಯ ಶರಣ ಬಸವೇಶ್ವರ ದೇವಾಲಯದ ಆವಾರ ಗೋಡೆಯನ್ನು ಕಟ್ಟಿಸಲಿಕ್ಕೆ ನಿಜಾಮಸರಕಾರದವರು ಪರವಾನಿಗಿ ಕೊಡಬೇಕು.

೭ ದೀನದಾರ ಸಿದ್ಧೀಕನೆಂಬ ಮುಸಲ್ಮಾನನ ಚಳವಳಿಯನ್ನು ಪ್ರತಿಬಂಧಮಾಡಬೇಕೆಂದು ಈ ಸಭೆಯು ನಿರ್ಧರಿಸುತ್ತದೆ.

೮ ಮದ್ರಾಸ ಇಲಾಖೆಯ ಖಾನೆಸುಮಾರಿ ಖಾತೆಯವರು ವೀರಶೈವ ಸಮಾಜವನ್ನು ಜನಗಣನೆಯಲ್ಲಿ ಹಾಕಿಲ್ಲ ಅದಕ್ಕಾಗಿ ಆ ಸರಕಾರಕ್ಕೆ ಯೋಗ್ಯದಾದ ಹಚ್ಚಬೇಕು

೯ ವೀರಶೈವ ಮಹಾಸಭೆಯ ಪುನರ್ಘಟನೆಯಲ್ಲಿ ೪೦ ಜನ ಸಭಾಸದರಿರತಕ್ಕದ್ದು. ಈ ಘಟನೆಯಲ್ಲಿ ೯ ಭಾಗಗಳನ್ನು ಮಾಡಿ ಆಯಾ ಭಾಗದ ಜನಸಂಖ್ಯೆಯ ಮಾನದಿಂದ ಸಭಾಸದರನ್ನು ನೇಮಿಸಬೇಕು.

೧೦ (ಅ) ಶ್ರೀ ಬಸಪ್ಪನವರು ಕಂಕಣವಾಡಿ ರಿಟಾಯರ್ಡ ಪೋಲೀಸ ಇನಸ್ಪೆಕ್ಟರ ಇವರು ವೀರಶೈವ ವಿದ್ಯಾರ್ಥಿಗಳ ಸಲುವಾಗಿ ಆಯುರ್ವೇದ ಶಿಕ್ಷಣ ಕೊಡಿಸಲು ೫೦ ಸಾವಿರ ರೂಪಾಯಿಗಳನ್ನು ಕೊಟ್ಟಿದ್ದಕ್ಕಾಗಿ ಅವರನ್ನು ಈ ಸಭೆಯು ಅಭಿನಂದಿಸುತ್ತದೆ.

(ಬ) ಸೊಲ್ಲಾಪೂರದ ಶ್ರೀ ಕಾಡಾದಿ ನಾಗಪ್ಪನವರು ವೀರಶೈವ ಬೋರ್ಡಿಂಗಿನ ಸಲುವಾಗಿ ೫೦ ಸಾವಿರ ರೂಪಾಯಿಗಳನ್ನು ಕೊಟ್ಟಿದ್ದಕ್ಕಾಗಿ ಈ ಸಭೆಯು ಅವರನ್ನು ಅಭಿನಂದಿಸುತ್ತದೆ.

(ಕ) ಶ್ರೀ ಕಪ್ಪಗಲ್ ಅಯ್ಯಪ್ಪನವರು ಗುಲಬುರ್ಗಾ ಇವರು ವೀರಶೈವ ವಿದ್ಯಾರ್ಥಿಗಳಿಗೆ ೫೦ ಸಾವಿರ ರೂಪಾಯಿಗಳನ್ನು ಕೊಟ್ಟಿದ್ದಕ್ಕಾಗಿ ಈ ಸಭೆಯು ಅವರನ್ನು ಅಭಿನಂದಿಸುತ್ತದೆ.

(ಡ) ಶ್ರೀ ಗೋವಿಂದರಾವ ಮಿರಜಕರ ಇವರು ವೀರಶೈವ ಏಕೀಕರಣಕ್ಕಾಗಿ ೧೫ ಸಾವಿರ ರೂಪಾಯಿಗಳನ್ನು ಕೊಟ್ಟಿದ್ದಕ್ಕಾಗಿ ಈ ಸಭೆಯು ಅವರನ್ನು ಅಭಿನಂದಿಸುತ್ತದೆ.

೧೧ ಕರ್ನಾಟಕ ಏಕೀಕರಣವನ್ನು ಅವಶ್ಯವಾಗಿ ಮಾಡಬೇಕೆಂದು ಈ ಸಭೆಯು ನಿರ್ಣಯಿಸುತ್ತದೆ ಆದರಂತೆ ವ್ಹಾಯಿಸರಾಯರಿಗೆ ತಿಳಿಸಬೇಕೆಂದು ನಿರ್ಧರಿಸುತ್ತದೆ.

೧೨ ಕರ್ನಾಟಕಕ್ಕೆ ಸ್ವತಂತ್ರ ಬಂದರ ವಿರಬೇಕೆಂದು ಈ ಸಭೆಯು ನಿರ್ಧರಿಸುತ್ತದೆ.

೧೩ ಜಾತ್ರೆಗಳಲ್ಲಿ ಆಗುತ್ತಿರುವ ಅಹಿಂಸಾ ಕಾರ್ಯವನ್ನು ನಿಲ್ಲಿಸಬೇಕೆಂದು ಈ ಸಭೆಯು ನಿರ್ಧರಿಸುತ್ತದೆ.

೧೪ ಚಿಕ್ಯಾಗೋದಲ್ಲಿ [ಅಮೇರಿಕಾ] ನೆರೆಯಲ್ಲಿರುವ ವಿಶ್ವಧರ್ಮ ಪರಿಷತ್ತಿಗೆ ಒಬ್ಬ ವೀರಶೈವ ಪ್ರತಿನಿಧಿಯನ್ನು ಕಳಿಸಬೇಕೆಂದು ಈ ಸಭೆಯು ನಿರ್ಧರಿಸುತ್ತದೆ.

೧೫ ಸಾಂಗಲಿ, ಮಿರಜ, ಜಮಖಂಡಿ ಮೊದಲಾದ ಸಂಸ್ಥಾನಗಳಲ್ಲಿ ಲಿಂಗಾಯತರ ಸಲುವಾಗಿ ಕನ್ನಡ ಶಾಲೆಗಳನ್ನು ತೆರೆಯುಲಿಕ್ಕೆ ಆಯಾ ಸಂಸ್ಥಾನಿಕರಿಗೆ ವಿನಂತಿ ಮಾಡಿಕೊಳ್ಳಬೇಕೆಂದು ಈ ಸಭೆಯು ನಿರ್ಧರಿಸುತ್ತದೆ.

೧೬ ಕೆಳದಿ ರಾಜ ಮನೆತನದ ಇತಿಹಾಸವನ್ನು ಬರೆಯಿಸಬೇಕೆಂದು ಈ ಸಭೆಯು ನಿರ್ಧರಿಸುತ್ತದೆ.

೧೭ ದೇವಿಹೊಸೂರ ಶೇತಕಿ ಶಾಲೆಯನ್ನು ಸರಕಾರದವರು ಬಂದುಮಾಡಬಾರದೆಂದು ಈ ಸಭೆಯು ವಿನಂತಿ ಮಾಡಿಕೊಳ್ಳುತ್ತದೆ.

೧೮ ವೀರಶೈವರು ತಮ್ಮ ಧರ್ಮದವರಿಂದಲೇ ತಯಾರಿಸಿದ ಬಟ್ಟೆ ಮೊದಲಾದ ವಸ್ತುಗಳನ್ನು ಉಪಯೋಗಿಸಬೇಕು.

೧೯ ವೀರಶೈವರಿಗೆ ಸರಕಾರಿ ಅಧಿಕಾರಸ್ಥಾನಗಳಲ್ಲಿ ಉಚ್ಚ ಜಾಗೆಯನ್ನು ಕೊಡಬೇಕು.

೨೦ ವೀರಶೈವರಲ್ಲಿಯ ಉಪ ಪಂಗಡಗಳ ಏಕೀಕರಣ ಮಾಡಬೇಕು.

## ೧೨ನೇಯ ಸಭೆ ೧೯೩೬ ರಾಯಚೂರ

೧ ಹಿಂದುಸ್ಥಾನದ ಚಕ್ರವರ್ತಿಗಳಾದ ೫ನೇ ಜಾರ್ಜ ಬಾದಶಹರ ನಿಧನದಿಂದ ಅಖಿಲ ವೀರಶೈವರಿಗೆ ದುಃಖವಾಗಿರುತ್ತದೆಂದು ಈ ಸಭೆಯು ತನ್ನ ವಿಷಾದವನ್ನು ವ್ಯಕ್ತಪಡಿಸುತ್ತದೆ.

೨ ಈಗ ಸಿಂಹಾಸನಾರೂಢರಾಗಿರುವ ಚಕ್ರವರ್ತಿಗಳಾದ ೮ನೇ ಎಡ್ವರ್ಡ ಬಾದಶಹರ ಬಗ್ಗೆ ನಮ್ಮ ಪೂರ್ಣ ರಾಜಭಕ್ತಿಯನ್ನು ಪ್ರಕಟಪಡಿಸಿ ಪರಮೇಶ್ವರನು ಅವರಿಗೆ ಚಿರಾಯುರಾರೋಗ್ಯವನ್ನು ದಯಪಾಲಿಸಲೆಂದು ನಾವು ಪ್ರಾರ್ಥಿಸುತ್ತೇವೆ.

೩ ವೀರಶೈವ ಸಮಾಜದಲ್ಲಿ ಪರಮಪೂಜ್ಯರೂ ವಿದ್ಯಾಭಿವೃದ್ಧಿ ಮೊದಲಾದ ಅನೇಕ ಕಾರ್ಯಗಳನ್ನು ಮಾಡಿದವರೂ ಆದ ಶ್ರೀ ಸಿದ್ಧಲಿಂಗ ಶಿವಾಚಾರ್ಯರು ಲಿಂಗೈಕ್ಯರಾದ್ದರಿಂದ ಈ ಸಭೆಗೆ ಬಹಳ ಖೇದವಾಗಿರುತ್ತದೆ.

೪ ಮಹಾ ತಪಸ್ವಿಗಳೂ ಮಹಾಸಭೆಯ ಕಾರ್ಯಕ್ಕೆ ಉತ್ತೇಜನವನ್ನು ಕೊಡುತ್ತ ಬಂದವರೂ ಸಮಾಜವೃದ್ಧಿಯ ಅನೇಕ ಕಾರ್ಯಗಳನ್ನು ಮಾಡಿದವರೂ ಆದ ಶ್ರೀ ಬೀಳೂರ ಗುರಬಸವ ಸ್ವಾಮಿಗಳವರು ಲಿಂಗೈಕ್ಯರಾದದ್ದಕ್ಕೆ ಈ ಸಭೆಗೆ ಬಹಳ ಖೇದವಾಗಿರುತ್ತದೆ.

೫ ಅಖಿಲ ಭಾರತ ವೀರಶೈವ ಮಹಾಸಭೆಯ ಒಂಬತ್ತನೆಯ ಅಧಿವೇಶನದ ಅಧ್ಯಕ್ಷರಾಗಿ ಸ್ಥಾನವನ್ನಲಂಕರಿಸಿದವರೂ ಸಮಾಜಕ್ಕೋಸ್ಕರ ಅನೇಕ ಉಪಯುಕ್ತ ಕಾರ್ಯಗಳನ್ನು ಮಾಡಿದವರು ಆದ ದಿ॥ ಬ॥ ಮೆಣಸಿನಕಾಯಿ ಶಾಂತವೀರಪ್ಪನವರು ನಿಧನ ಹೊಂದಿದ್ದಕ್ಕೆ ಈ ಸಭೆಗೆ ಬಹಳ ಖೇದವಾಗಿರುತ್ತದೆ.

೬ ವೀರಶೈವ ಧರ್ಮಾಭಿವೃದ್ಧಿ ಮತ್ತು ಸಮಾಜಾಭಿವೃದ್ಧಿಯ ಅನೇಕ ಕಾರ್ಯಗಳನ್ನು ಮಾಡಿದವರಾದ ರಾ॥ ಜೀರಿಗೆ ಬಸಲಿಂಗಪ್ಪನವರು ನಿಧನ ಹೊಂದಿದಕ್ಕೆ ಈ ಸಭೆಗೆ ಬಹಳ ಖೇದವಾಗಿರುತ್ತದೆ.

೭ ಕರ್ನಾಟಕ ಭಾಷಾಭಿವೃದ್ಧಿ ವೀರಶೈವ ಸಮಾಜಾಭಿವೃದ್ಧಿ ಮೊದಲಾದ ಅನೇಕ ಕಾರ್ಯಗಳನ್ನು ಮಾಡಿ ಕಡೆಗೆ ತಮ್ಮ ಆಸ್ತಿಯನ್ನು ಹೈಸ್ಕೂಲಕ್ಕೋಸ್ಕರ ಅರ್ಪಿಸಿದಂಥ ಶ್ರೀ ತಮ್ಮಣ್ಣಪ್ಪ ಚಿಕ್ಕೋಡಿ ಬನಹಟ್ಟಿ ಇವರು ನಿಧನ ಹೊಂದಿದ್ದಕ್ಕೆ ಈ ಸಭೆಯು ತನ್ನ ಖೇದವನ್ನು ವ್ಯಕ್ತಪಡಿಸುತ್ತದೆ.

೮ ವೀರಶೈವ ಸಮಾಜದ ಸುಧಾರಣೆಗಾಗಾಗಿ ಅನೇಕ ಮಹತ್ವದ ಪ್ರಯತ್ನಗಳನ್ನು ಮಾಡಿದ ಶ್ರೀ ಬಾಪುರಾವ ದೇಶಮುಖ ವಕೀಲ ಹೈಕೋರ್ಟ ಹೈದ್ರಾಬಾದ ಇಹರು ನಿಧನ ಹೊಂದಿದ್ದಕ್ಕೆ ಈ ಸಭೆಯು ತನ್ನ ವಿಷಾದವನ್ನು ವ್ಯಕ್ತಪಡಿಸುತ್ತದೆ.

೯ ವೀರಶೈವ ಸಮಾಜ ಸುಧಾರಣೆ ಮತ್ತು ವಿದ್ಯಾಪ್ರಸಾರ ಇವುಗಳಿಗೋಸ್ಕರ ಯಾವಾಗಲೂ ಸಹಾಯ ಮಾಡುತ್ತ ಬಂದಿರುವ ಸರ್, ರಾಜಾ ಲಖಮನಗೌಡಾ ಬಸವಪ್ರಭು ಸರದೇಸಾಯಿ ಒಂಟಮುರಿ ಇವರು ಲಿಂಗರಾಜ ಕಾಲೇಜದ ಸಲುವಾಗಿ ಒಂದು ಲಕ್ಷ ರೂಪಾಯಿ ಹಣಕೊಟ್ಟದ್ದಕ್ಕೆ ಈ ಸಭೆಯು ತನ್ನ ಕೃತಜ್ಞತೆಯನ್ನು ಅವರಿಗೆ ಅರ್ಪಿಸುತ್ತದೆ.

೧೦ ನಿಜಾಮ ಇಲಾಖೆಯಲ್ಲಿ ವೀರಶೈವ ಸಮಾಜದ ಶಿಕ್ಷಣ ಪ್ರಸಾರಕ್ಕೋಸ್ಕರ ವೀರಶೈವರು ಅವಶ್ಯಕ ಸ್ಥಳಗಳಲ್ಲಿ ಬೋರ್ಡಿಂಗಗಳನ್ನು ಸ್ಥಾಪಿಸಬೇಕೆಂದು ಈ ಸಭೆಯು ಅಭಿಪ್ರಾಯಪಡುತ್ತದೆ,

೧೧. ಉಸ್ಮಾನಿಯಾ ಕಾಲೇಜದಲ್ಲಿಯ ಬೋರ್ಡಿಂಗದಲ್ಲಿ ವೀರಶೈವ ವಿದ್ಯಾರ್ಥಿಗಳಿಗೆ ಊಟಕ್ಕೆ ಸ್ವತಂತ್ರ ವ್ಯವಸ್ಥೆ ಇಲ್ಲದ್ದರಿಂದ ಅವರಿಗೆ ಈ ವಿಷಯ ಆವಶ್ಯಕ ಏರ್ಪಾಡು ಮಾಡಬೇಕೆಂದು ಈ ಸಭೆಯು ಅಭಿಪ್ರಾಯಪಡುತ್ತದೆ.

೧೨. ನಿಜಾಮ ಇಲಾಖೆಯಲ್ಲಿ ಶ್ರೀ ಬಸವಜಯಂತಿ ಉತ್ಸವ ದಿನದಲ್ಲಿ ಸರಕಾರಿ ಕೋರ್ಟು ಕಚೇರಿಗಳಿಗೆ ರಜೆಯು ಕೊಡಲ್ಪಡುವದಿಲ್ಲ. ಇದರಿಂದ ಇಲ್ಲಿ ಬಹುಜನ ಸಮಾಜವಾಗಿರುವ ವೀರಶೈವರಿಗೆ ಬಹಳ ಅನಾನುಕೂಲವಾಗುತ್ತಿರುವದರಿಂದ ಈ ದಿನ ರಜೆಯು ಕೊಡಲ್ಪಡಬೇಕೆಂತು ಈ ಸಭೆಯು ನಿಜಾಮ ಸರಕಾರಕ್ಕೆ ಬಿನ್ನವಿಸಿಕೊಳ್ಳುತ್ತದೆ.

೧೩. ಈಗಿನದು ಯಾಂತ್ರಿಕ ಯುಗವಾಗಿದ್ದದರಿಂದ ಎಲ್ಲ ತರದ ಯಂತ್ರ ವಿದ್ಯೆಗಳನ್ನೂ ಶಾಸ್ತ್ರೀಯ ವಿಷಯಗಳನ್ನೂ ನಮ್ಮ ವಿದ್ಯಾರ್ಥಿಗಳು ಕಲಿಯುವದು ಬಹಳ ಅವಶ್ಯವಿರುತ್ತದೆ. ಆದ್ದರಿಂದ ಈ ವಿಷಯಗಳನ್ನು ಪರದೇಶಗಳಲ್ಲಿಯೂ ಈ ದೇಶಗಳಲ್ಲಿಯೂ ಇರುವಂಥ ಔದ್ಯೋಗಿಕ ಶಾಲೆಗಳಲ್ಲಿ ಕಲಿಯಲು ವೀರಶೈವರು ವಿದ್ಯಾರ್ಥಿಗಳಿಗೆ ಎಲ್ಲ ತರದಿಂದಲೂ ಪ್ರೋತ್ಸಾಹಿಸಬೇಕೆಂದು ಈ ಸಭೆಯು ಅಭಿಪ್ರಾಯಪಡುತ್ತದೆ.

೧೪. ವೀರಶೈವ ಸಮಾಜದಲ್ಲಿ ಅನೇಕ ಕಡೆಗೆ ಶಿಕ್ಷಣ ಸಂಸ್ಥೆಗಳಿದ್ದು ಅವುಗಳಲ್ಲಿ ಶಿಕ್ಷಣ ಹೊಂದುವ ವಿದ್ಯಾರ್ಥಿಗಳಿಗೆ ಈಗಿನ ಕಾಲಕ್ಕೆ ತಕ್ಕಂಥ ಮತ್ತು ಸಮಾಜಕ್ಕೆ ಉಪಯೋಗವಾಗಿರುವಂಥ ಶಿಕ್ಷಣ ಕ್ರಮಗಳನ್ನು ತಿಳಿಸಿಕೊಡಲಿಕ್ಕೂ ವಿದ್ಯಾರ್ಥಿಗಳ ಜೀವನ ಕ್ರಮದಲ್ಲಿ ಯೋಗ್ಯವಾಗಿರುವ ಹಾದಿಯನ್ನು ಕಂಡು ಹಿಡಿಯಲಿಕ್ಕೂ ಶಿಕ್ಷಣ ಹೊಂದಿದವರಲ್ಲಿ ಈಗಿರುವ ಅನುದ್ಯೋಗ ಸ್ಥಿತಿಯನ್ನು ಶಕ್ಯವಿದ್ದಷ್ಟರ ಮಟ್ಟಿಗೆ ದೂರಮಾಡಲು ಯತ್ನಿಸಲಿಕ್ಕೂ ಒಂದು ಮಧ್ಯವರ್ತೀ ಸಂಘವನ್ನು ಸ್ಥಾಪಿಸಬೇಕೆಂದು ಈ ಸಭೆಯು ಅಭಿಪ್ರಾಯಪಡುತ್ತದೆ.

೧೫. ಈಗಿನ ವ್ಯಾಪಾರದ ಪರಿಸ್ಥಿತಿಯು ಅಂತರರಾಷ್ಟ್ರೀಯ ಸ್ವರೂಪವನ್ನು ಹೊಂದಿರುವದರಿಂದ ವ್ಯಾಪಾರಸ್ಥರಿಗೆ ದೇಶವಿದೇಶಗಳಲ್ಲಿಯ ಹುಟ್ಟುವಳಿಗಳನ್ನೂ ವ್ಯಾಪಾರದಲ್ಲಿ ಆಗಾಗ್ಗೆ ಆಗುವ ಬದಲಾವಣೆಗಳನ್ನೂ ಹಣದ ವ್ಯವಹಾರಗಳನ್ನೂ ಇವೇ ಮೊದಲಾದ ಉಪಯುಕ್ತ ಮಾಹಿತಿಗಳನ್ನು ಸಂಗ್ರಹಿಸಿ ಒದಗಿಸಿಕೊಡುವದು ಬಹು ಅವಶ್ಯವಾಗಿದ್ದು ಇದಕ್ಕೋಸ್ಕರ ಒಂದು ಮಧ್ಯವರ್ತೀ ವ್ಯಾಪಾರೀ ಮಾಹಿತಿ ಸಂಘವನ್ನು ಸ್ಥಾಪಿಸಬೇಕೆಂದು ಈ ಸಭೆಯು ಅಭಿಪ್ರಾಯಪಡುತ್ತದೆ

೧೬. ವೀರಶೈವ ಸಮಾಜವು ಎಲ್ಲ ಕಡೆಗೂ ವ್ಯಾಪಾರಾಭಿವೃದ್ಧಿಯಲ್ಲಿ ಈಗ ಬಹುಮಟ್ಟಿಗೆ ಹಿಂದೆಗೆಯಹತ್ತಿದ್ದು ಈ ದುಃಸ್ಥಿತಿಯನ್ನು ಹೊಗಲಾಡಿಸಲು

ಹೊಸಪದ್ಧತಿಯ ಪ್ರಕಾರ ವೀರಶೈವ ವಿದ್ಯಾರ್ಥಿಗಳು ವ್ಯಾಪಾರೀ ಶಿಕ್ಷಣವನ್ನು ಹೊಂದಬೇಕೆಂತಲೂ ವ್ಯಾಪಾರಸ್ಥರು ವ್ಯಾಪಾರಾಭಿವೃದ್ಧಿಗೆ ಸಹಾಯಕಾರಿಯಾಗಿರುವ ಬಂದರಸ್ಥಳಗಳಿಗೂ ಇತರ ಪ್ರಾಂತಗಳಿಗೂ ಪರದೇಶಗಳಿಗೂ ಹೋಗಿ ಸಾಹಸಪಡಬೇಕೆಂತಲೂ ಹಾಗೂ ಅಲ್ಲಿ ಹೋಗುವ ವೀರಶೈವರಿಗೆ ತಮ್ಮ ವ್ಯವಹಾರದಲ್ಲಿ ಬೇಕಾಗುವ ಅವಶ್ಯಕ ಸೌಕರ್ಯಗಳನ್ನು ಕಲ್ಪಿಸಬೇಕೆಂತಲೂ ಈ ಸಭೆಯು ಅಭಿಪ್ರಾಯಪಡುತ್ತದೆ.

೧೭. ವೀರಶೈವ ಸಂಸ್ಕೃತಿಯ ಪೋಷಣೆಗೆ ಧರ್ಮಗ್ರಂಥಗಳ ಸಂಶೋಧನ ಅವುಗಳ ರಕ್ಷಣೆ ಹಾಗು ಅವುಗಳ ಪ್ರಕಟನೆ ಇವು ಬಹು ಅವಶ್ಯವಾಗಿದ್ದು ಇಂಥ ಕಾರ್ಯಗಳಿಗೆ ಸಹಾಯಕಾರಿಯಾಗುವಂತೆ ಒಂದು ಮಧ್ಯವರ್ತೀ ಪುಸ್ತಕಾಲಯವನ್ನೂ ಒಂದು ನಿಧಿಯನ್ನೂ ಸ್ಥಾಪಿಸಬೇಕೆಂದು ಈ ಸಭೆಯು ಅಭಿಪ್ರಾಯಪಡುತ್ತದೆ.

೧೮. ವೀರಶೈವ ಪ್ರಾಚ್ಯ ಸಂಶೋಧನ ಸಮಿತಿಯೊಂದು ಸ್ಥಾಪನೆಯಾಗುವದು ಅತ್ಯವಶ್ಯಕವಿರುತ್ತದೆ. ಈ ಕಾರ್ಯನಿರ್ವಾಹಕ್ಕೆ ಈ ಕೆಳಗೆ ಕಂಡ ಮಹಾಜನರ ಸಮಿತಿಯು ಇರಬೇಕೆಂದು ನಿರ್ಣಯಿಸಿರುತ್ತದೆ. ಅವರು ತಮ್ಮ ಸಮಿತಿಯಲ್ಲಿ ತಮಗೆ ಬೇಕಾದ ಇತರ ಜನರನ್ನು ಸೇರಿಸಿಕೊಳ್ಳಬಹುದು.

(೧) ಡಾ॥ ನಂದೀಮಠ ಎಸ್. ಸಿ.
(೨) ಮಿ॥ ಬಸವನಾಳ ಎಸ್. ಎಸ್.
(೩) ಶ್ರೀ. ಚಂದ್ರಶೇಖರ ಶಾಸ್ತ್ರಿ.
(೪) ,, ನಾಗೇಶಶಾಸ್ತ್ರಿಗಳು.
(೫) ಮಿ॥ ಟಿ. ಎಚ್. ಎಮ್. ಸದಾಶಿವಯ್ಯ.
(೬) ,, ವ್ಹಿ. ಬಿ. ಹಾಲಭಾವಿ.
(೭) ರಾ॥ ಸಾ॥ ಪಿ. ಜಿ. ಹಳಕಟ್ಟಿ. (ಚೇರಮನ್ನ)

೧೯ (೧) ರಾಜಕೀಯ ಸುಧಾರಣಾ ಕಾಯದೆಯು ಬೇಗನೆ ಪ್ರಚಾರದಲ್ಲಿ ಬರತಕ್ಕದ್ದಾಗಿದ್ದು ಇದಕ್ಕೋಸ್ಕರ ವೀರಶೈವರು ಸುಸಂಘಟಿತವಾಗಿ ಪ್ರಯತ್ನಿಸಿ ಹೆಚ್ಚಾಗಿ ಕಾಯದೆಮಂಡಳಗಳಲ್ಲಿ ಸೇರಬೇಕೆಂತಲೂ ಅವುಗಳಲ್ಲಿ ಸೇರಿದ ಬಳಿಕ ದೇಶಕ್ಕೂ ಸಮಾಜಕ್ಕೂ ಹಿತಕರವಾಗಿರುವ ಕಾರ್ಯಕ್ರಮಗಳನ್ನು ಅನುಸರಿಸಿ ಅವುಗಳನ್ನು ನಡೆಯಿಸಬೇಕೆಂತಲೂ ಈ ಸಭೆಯು ಅಭಿಪ್ರಾಯ ಪಡುತ್ತದೆ.
(೨) ಈಗಿನ ಪರಿಸ್ಥಿತಿಯಲ್ಲಿ ರಾಜಕಾರಣದ ಜ್ಞಾನವು ಅವಶ್ಯವಾಗಿದ್ದು ಅದನ್ನು ಪಡೆಯಲೂ ಪ್ರಸಾರಮಾಡಲೂ ಸಹಾಯಕವಾಗುವಂತೆ ಅಲ್ಲಲ್ಲಿ ರಾಜಕೀಯ ಗ್ರಂಥಾಲಯಗಳನ್ನು ಸಮಿತಿಗಳನ್ನು ಸ್ಥಾಪಿಸಬೇಕೆಂದು ಈ ಸಭೆಯು ಅಭಿಪ್ರಾಯ ಪಡುತ್ತದೆ.

೨೦ ಎಲ್ಲ ವೀರಶೈವರು ತಮ್ಮಲ್ಲಿರುವ ಒಳಪಂಗಡ ಭೇದಗಳನ್ನು ತೆಗೆದುಹಾಕಬೇಕೆಂತಲೂ ವೀರಶೈವರಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಚಾತುರ್ವರ್ಣಗಳಿಲ್ಲೆಂತಲೂ ಈ ಚಾತುರ್ವರ್ಣಗಳ ಮತತತ್ವಗಳಿಗೂ ವೀರಶೈವಮತತತ್ವಗಳಿಗೂ ಮಹದಂತರವಿರುತ್ತದೆಂತಲೂ ಈ ಮಹಾಸಭೆಯು ಅಭಿಪ್ರಾಯಪಡುತ್ತದೆ.

೨೧ ಸ್ತ್ರೀ ಶಿಕ್ಷಣಕ್ಕೆ ವೀರಶೈವ ಸಮಾಜದವರು ಹೆಚ್ಚಾಗಿ ಲಕ್ಷ್ಯಕೊಡಬೇಕೆಂದು ಈ ಮಹಾ ಸಭೆಯು ಅಭಿಪ್ರಾಯಪಡುತ್ತದೆ.

೨೨ ವಿಜಯನಗರ ಸ್ಮಾರಕೋತ್ಸವವು ಕರ್ನಾಟಕದ ಎಲ್ಲ ಸಮಾಜಗಳಿಗೆ ಮಹತ್ವದ್ದಿದ್ದು ಇದರಲ್ಲಿ ವೀರಶೈವರು ಹೆಚ್ಚಾಗಿ ಭಾಗವನ್ನು ವಹಿಸಿ ಅದಕ್ಕೆ ಸಹಾಯಮಾಡಬೇಕೆಂದು ಈ ಸಭೆಯು ಸೂಚಿಸಿರುತ್ತದೆ.

೨೩ ಬೆಂಗಳೂರು ಚಿರಸ್ಥಾಯಿ ಫಂಡಿನವರು ಅಖಿಲ ಭಾರತ ವೀರಶೈವ ಮಹಾಸಭೆಗಳನ್ನು ಕೂಡಿಸಲು ಧನ ಸಹಾಯ ಮಾಡುತ್ತಿರುವಂತೆ ಅಖಿಲ ಭಾರತ ವೀರಶೈವ ತರುಣ ಪರಿಷತ್ತುಗಳನ್ನು ಕೂಡಿಸಲಿಕ್ಕೆ ಅವರ ಫಂಡಿನಿಂದ ಧನ ಸಹಾಯ ಮಾಡಬೇಕೆಂದು ಈ ಸಭೆಯು ಅವರಿಗೆ ಸೂಚಿಸುತ್ತದೆ.

೨೪ ಮಧ್ಯವರ್ತೀ ಮಂಡಲದ ಸಾಮಾನ್ಯ ನಿರೀಕ್ಷಣೆಯಲ್ಲಿ ಮಹಾಸಭೆಯ ಎಲ್ಲ ಕಾರ್ಯಗಳನ್ನು ಪ್ರಚಾರದಲ್ಲಿ ತರಲಿಕ್ಕೆ ಒಂದು ಕಾರ್ಯಕಾರೀ ಕಮೀಟಿಯು ಇರತಕ್ಕದ್ದು. ಇದರಲ್ಲಿ ೯ ರಿಂದ ೧೫ ಜನ ಸಭಾಸದರಿದ್ದು ಅವರನ್ನು ಮಧ್ಯವರ್ತೀ ಮಂಡಳವು ನೇಮಿಸತಕ್ಕದ್ದು. ಇದಕ್ಕೆ ಮಹಾ ಸಭೆಯ ಅಧ್ಯಕ್ಷರಾಗಲಿ ಇಲ್ಲವೆ ಅವರು ತಮ್ಮ ವತಿಯಿಂದ ನೇಮಿಸಿದವರಾಗಲಿ ಚೇರಮನ್ನರಿರತಕ್ಕದ್ದು. ಈ ಕಾರ್ಯಕಾರೀ ಕಮೀಟಿಯು ಕೈಕೊಳ್ಳತಕ್ಕ ಕಾರ್ಯಗಳನ್ನು ಕಾಲಕಾಲಕ್ಕೆ ನಿರ್ಧರಿಸಿ ಅವುಗಳಿಗೋಸ್ಕರ ಅವಶ್ಯಕ ಸ್ಥಳಗಳಲ್ಲಿ ಸಹಾಯಕ ಕಮೀಟಿಗಳನ್ನು ನೇಮಿಸಿಕೊಂಡು ಅವುಗಳ ಮುಖಾಂತರವಾಗಲಿ ಇಲ್ಲವೆ ಪ್ರಾಂತಿಕ, ಜಿಲ್ಲಾ, ತಾಲೂಕು, ಗ್ರಾಮಕಮೀಟಿಗಳ ಮುಖಾಂತರವಾಗಲಿ ತಮ್ಮ ಕಾರ್ಯಮಾಡತಕ್ಕದ್ದು. ಈ ನಿರ್ಣಯದ ಅಭಿಪ್ರಾಯಕ್ಕೆ ಅನುಸರಿಸಿ ಮಹಾಸಭೆಯ ನಿಯಮಗಳಲ್ಲಿ ಅವಶ್ಯಕ ಬದಲಾವಣೆಗಳನ್ನು ಮಾಡುವ ಅಧಿಕಾರವು ಮಹಾಸಭೆಯ ಅಧ್ಯಕ್ಷರಿಗೆ ಕೊಡಲ್ಪಟ್ಟಿರುತ್ತದೆ.

ಮಧ್ಯವರ್ತೀ ಮಂಡಳದ ಚೇರಮನ್ನರು ಮಹಾಸಭೆಯ ಅಧ್ಯಕ್ಷರಿರಬೇಕೆಂದು ಈಗ ನಿಯಮವಿದೆ. ಆದರೆ "ಮಧ್ಯವರ್ತೀ ಮಂಡಳದ ಅಧ್ಯಕ್ಷರು ರಾ|| ಸಾ|| ಪಿ. ಜಿ. ಹಳಕಟ್ಟಿಯವರು ಮುಂದಿನ ಮಹಾಸಭೆಯ ವರೆಗೆ ಇರಬೇಕು" ಎಂಬ ವಿಶೇಷ ನಿರ್ಣಯವು ಈ ಮೂಲಕ ಮಾಡಲ್ಪಟ್ಟಿದೆ.

೨೫ ವೀರಶೈವ ಮಧ್ಯವರ್ತೀ ಮಂಡಳ ಮತ್ತು ಕಾರ್ಯಕಾರೀ ಕಮೀಟಿಗಳಲ್ಲಿ ಕೆಳಗೆ ಕಾಣಿಸಿದವರು ಸಭಾಸದರಾಗಿರತಕ್ಕದ್ದು. ಅವರು ಹೆಸರುಗಳು.

## ಮಧ್ಯವರ್ತಿ ಮಂಡಳದ ಸಭಾಸದರು.

ರಾವಸಾಹೇಬ ಪಿ. ಜಿ. ಹಳಕಟ್ಟಿ ಬಿ. ಎ. ಎಲ್ ಎಲ್. ಬಿ
ವಿಜಾಪೂರ ಅಧ್ಯಕ್ಷ.

ರಾ|| ರಾ|| ತಿಮ್ಮಣ್ಣ ಚನ್ನಪ್ಪ ಗಣದಿನ್ನಿ ರಾಯಚೂರು ಉಪಾಧ್ಯಕ್ಷ.

## ಮುಂಬಯಿ ಇಲಾಖಾ ದಕ್ಷಿಣಭಾಗ.

(೧) ಕರವೀರಪ್ಪ ಕುಲಕರ್ಣಿ ವಕೀಲ ಧಾರವಾಡ
(೨) ಶಿದ್ಧರಾಮಪ್ಪ ಪಾವಟೆ ಬಿ. ಏ. ಎಲ್ ಎಲ್. ಬಿ. ಹುಬ್ಬಳ್ಳಿ
(೩) ಜಿ. ಆರ್. ನಲವಡಿ ಬಿ. ಏ. ಎಲ್ ಎಲ್. ಬಿ. ಧಾರವಾಡ
(೪) ವೀರಭದ್ರಪ್ಪ ಹಾಲಭಾವಿ ಬಿ. ಏ. ಎಲ್ ಎಲ್. ಬಿ. ಧಾರವಾಡ
(೫) ಡಾ|| ಎಸ್. ಸಿ. ನಂದಿಮಠ ಎಮ್. ಏ. ಪಿ ಎಚ್ ಡಿ. ಬೆಳಗಾವ
(೬) ಎಸ್. ವ್ಹಿ. ಅಡ್ಡಣಗಿ ಬಿ. ಏ. ಎಲ್ ಎಲ್. ಬಿ. ಬೆಳಗಾವ
(೭) ಮುರಿಗೆಯ್ಯ ಜಂಗಿನ ಬಾಗಲಕೋಟೆ
(೮) ಮಂಜಪ್ಪ ಹರ್ಡೇಕರ ಆಲಮಟ್ಟಿ
(೯) ಬಿ. ಡಿ. ತಾಳೀಕೋಟಿ ಬಿ. ಎ. ಎಲ್ ಎಲ್. ಬಿ. ವಿಜಾಪೂರ
(೧೦) ಬಸಪ್ಪ ಕೋರಾವಾರ ಸಿರಸಿ
(೧೧) ಟಿ. ವ್ಹಿ. ಕೋಟಿ ಬಿ. ಎ. ಎಲ್ ಎಲ್. ಬಿ. ಗದಗ

## ಮೈಸೂರು ಪ್ರಾಂತ.

(೧೨) ಎಮ್. ನಾಗಪ್ಪ ಬೆಂಗಳೂರ ಸಿಟಿ
(೧೩) ಡಿ. ಎಸ್, ಮಲ್ಲಪ್ಪ ಎಮ್. ಎಲ್. ಸಿ. ತಿಪಟೂರ
(೧೪) ಎಮ್. ಸಿ. ಮಲ್ಲಪ್ಪ ಮೈಸೂರು ಈಗ ಮುಂಬಯಿ
(೧೫) ಉರುಕೊಂಡೆ ಮುರುಗೆಪ್ಪ ಡಾವಣಗೆರೆ
(೧೬) ಟಿ. ಎನ್. ಚನ್ನಪ್ಪ ಬೆಂಗಳೂರ ಸಿಟಿ
(೧೭) ಬಿ. ಶಿವಮೂರ್ತಿ ಶಾಸ್ತ್ರಿಗಳು ತುಮಕೂರು
(೧೮) ಗೌಡರ ಗುರುಶಾಂತಪ್ಪ ಡಾವಣಗೆರೆ
(೧೯) ಬಿ. ಸಿ. ಬಸಪ್ಪಶೆಟ್ಟಿ ಚಿಕ್ಕ ಮಗಳೂರು

## ಮದ್ರಾಸ ಇಲಾಖೆ.

(೨೦) ವಾಯ್. ಮಹಾಬಲೇಶ್ವರಪ್ಪ ಬಳ್ಳಾರಿ
(೨೧) ಎಮ್. ಎಚ್. ಎಮ್. ನಂಜುಂಡಯ್ಯ ಬಿ. ಎ. ಬಿ. ಎಲ್. ಹೊಸಪೇಟೆ

(೨೨) ಡಿ. ಕೆ. ರೆಡ್ಡಿ ಬಿ. ಎ. ಬಿ. ಎಲ್. ಬಳ್ಳಾರಿ
(೨೩) ಜಿ. ಪಿ ಮಲ್ಲಪ್ಪ ಕೊಳ್ಳೆಗಾಲ
(೨೪) ಬೆಲ್ಲದ ಚನ್ನಪ್ಪ ಹೋಸಪೇಟಿ

## ನಿಜಾಮ ಇಲಾಖೆ.

(೨೫) ಸಂಗ್ರಾಮಪ್ಪ ವಕೀಲ ಉದಗೀರ
(೨೬) ವಿರೂಪಾಕ್ಷ ದೇಶಿಕೇಂದ್ರ ಸ್ವಾಮಿ ಲಾತೂರ
(೨೭) ಮಡಿವಾಳಪ್ಪ ಖೇಣಿ ರಂಜೇರಿ
(೨೮) ಶ್ರೀನಿವಾಸರಾವ ವಕೀಲ ಮದನೂರಕರ ಹೈದ್ರಾಬಾದ
(೨೯) ಹಣಮಂತರಾವ ಹಾಗರಿಗಿ ವಕೀಲ ಕಲಬುರ್ಗಿ
(೩೦) ಮಹಾಂತಪ್ಪ ಆಳಂದ ಕಲಬುರ್ಗಿ
(೩೧) ಅಮರಪ್ಪ ಜಾಡಲದಿನ್ನಿ ರಾಯಚೂರ
(೩೨) ಹತನೂರ ಸಕರೆಪ್ಪ ರಾಯಚೂರ
(೩೩) ಎನ್. ರುದ್ರಪ್ಪ ವಕೀಲ ಯಾದಗೀರ

## ಮುಂಬಯಿ ಇಲಾಖಾ ಮಧ್ಯ ಮತ್ತು ಉತ್ತರ ವಿಭಾಗಗಳು.

(೩೪) ಎಮ್. ಎಸ್. ಸರದಾರ ಬ್ಯಾರ್. ಆ್ಯಟಲಾ ಸೋಲಾಪುರ
(೩೫) ಎಸ್. ಎಚ್. ಕಾನಡೆ ಬಿ. ಎ. ಧೂಳಿಯಾ
(೩೬) ಸಿದ್ದಮಲ್ಲಪ್ಪ ಕಲ್ಯಾಣಶೆಟ್ಟಿ ಬಿ. ಎ. ಎಲ್ ಎಲ್. ಬಿ. ಸೋಲಾಪುರ
(೩೭) ರಾ|| ಸಾ|| ಕಲ್ಯಾಣಿ ಸಾತಾರಾ

## ವರ್ಹಾಡ ಮಧ್ಯಪ್ರಾಂತ ಮತ್ತು ಇತರ ಹಿಂದುಸ್ತಾನ.

(೩೮) ಬಿ. ಕೆ. ಹಿಂಗಮಿರೆ ಹಿಂಗಣಘಾಟ ಸಿ. ಪಿ.
(೩೯) ರಾ|| ಸಾ|| ಮಾಧವರಾವ ದೇಶಮುಖ ಯವತಮಾಳ

## ಮುಂಬಯಿ ಇಲಾಖೆಯೊಳಗಿನ ಸಂಸ್ಥಾನಗಳು.

(೪೦) ಎಮ್. ಡಿ. ಶ್ರೇಷ್ಠಿ ಕೊಲ್ಹಾಪುರ
(೪೧) ಮುರಿಗೆಯ್ಯ ಬಾಗೋಜಿ ರಬಕವಿ
(೪೨) ಎಮ್. ಎಸ್. ಹಿರೇಮಠ ವಕೀಲ ಸಾಂಗಲಿ
(೪೩) ಎಸ್. ಜಿ. ಕೋರೆ ವಕೀಲ ಮಿರ್ಜಿ
(೪೪) ಮ|| ರಾ|| ರಾ|| ಬಂಗೀ ವಕೀಲ ಜಮಖಂಡಿ

ಟೀಪು:— ಒಂದು ಸ್ಥಳವು ಇನ್ನೂ ತುಂಬಲ್ಪಟ್ಟಿಲ್ಲ.

## ಕಾರ್ಯಕಾರೀ ಕಮೀಟಿಯ ಸಭಾಸದರು.

(೧) ರಾ|| ಸಾ|| ಪಿ. ಜಿ. ಹಳಕಟ್ಟಿ ವಿಜಾಪುರ (ಚೇರಮನ್ನ)
(೨) ಮಂಜಪ್ಪ ಹರ್ಡೇಕರ ಆಲಮಟ್ಟಿ
(೩) ಮುರಿಗೆಯ್ಯ ಜಂಗಿನ ಬಾಗಲಕೋಟೆ
(೪) ಬಶೆಟೆಪ್ಪ ಬಳೂಟಗಿ ಹುನಗುಂದ
(೫) ಬಿ. ಶಿವಮೂರ್ತಿ ಶಾಸ್ತ್ರಿಗಳು ತುಮಕೂರ
(೬) ಶ್ರೀ ಮಹಾದೇವ ಸ್ವಾಮಿಗಳು ಬೆಂಗಳೂರು
(೭) ವೇ. ಮೂ. ಚಂದ್ರಶೇಖರ ಶಾಸ್ತ್ರಿಗಳು ಹೊಳಲು
(೮) ಎಮ್. ಎಸ್. ಸರದಾರ ಬಾರ-ಆಟ-ಲಾ ಸೊಲ್ಲಾಪುರ
(೯) ಎಮ್. ಎಚ್. ಎಮ್. ನಂಜುಂಡಯ್ಯ ಹೊಸಪೇಟೆ
(೧೦) ಸಂಗ್ರಾಮಪ್ಪ ವಕೀಲ ಉದಗೀರ
(೧೧) ಶಿದಮಲ್ಲಪ್ಪ ಕಲ್ಯಾಣಶೆಟ್ಟಿ ಸೊಲ್ಲಾಪುರ
(೧೨) ಶಂಕರೆಪ್ಪ ಧನಶೆಟ್ಟಿ ವಿಜಾಪುರ

ಟೀಪು:— ಉಳಿದ ಸ್ಥಳಗಳು ತುಂಬಲ್ಪಟ್ಟಿಲ್ಲ.

---

# ಅಖಿಲ ಭಾರತ ಶ್ರೀಮದ್ವೀರಶೈವ ಮಹಾಸಭೆಯ ನಿಯಮಗಳು.

## ೧. ಹೆಸರು, ಉದ್ದೇಶ, ಸದಸ್ಯರು.

(೧) **ಹೆಸರು:—** ಈ ಸಂಸ್ಥೆಯ ಹೆಸರು ಅಖಿಲ ಭಾರತ ಶ್ರೀಮದ್ವೀರ ಶೈವ ಮಹಾಸಭೆ ಎಂದು ಇರುವದು.

(೨) **ಉದ್ದೇಶ:—** ಈ ಸಂಸ್ಥೆಯ ಉದ್ದೇಶವು ವೀರಶೈವ ಜನಾಂಗದ ಉತ್ಕರ್ಷವನ್ನು ಎಲ್ಲ ಬಗೆಯಿಂದ ಮಾಡುವದಿರುವದು.

(೩) **ಸದಸ್ಯರು:—** ಈ ಸಂಸ್ಥೆಯಲ್ಲಿ ೧. ಆಶ್ರಯದಾತರು ೨. ಆಜೀವ ಸದಸ್ಯರು ೩. ಸಾಮಾನ್ಯಸದಸ್ಯರು ಎಂದು ಮೂರು ವರ್ಗದ ಸದಸ್ಯರು ಇರುವರು. ಇವರೆಲ್ಲರು ವೀರಶೈವರಾಗಿರತಕ್ಕದ್ದು.

(ಅ) ೧೦೦೦ ಅಥವಾ ಅದಕ್ಕೂ ಹೆಚ್ಚು ರೂಪಾಯಿಗಳನ್ನು ಕೊಟ್ಟವರು ಆಶ್ರಯದಾತರಾಗುವರು.

(ಬ) ೧೦೦ ಅಥವಾ ಅದಕ್ಕೂ ಹೆಚ್ಚು ರೂಪಾಯಿಗಳನ್ನು ಕೊಟ್ಟವರು ಆಜೀವ ಸದಸ್ಯರಾಗುವರು.

(ಕ) ೨ ರೂಪಾಯಿ ವಾರ್ಷಿಕ ವರ್ಗಣಿಯನ್ನು ಕೊಟ್ಟಂಥವರು ಸಾಮಾನ್ಯ ಸದಸ್ಯರಾಗುವರು.

**ಸೂಚನೆ:—** ಈ ಒಳಗಾಗಿ ಮೇಲ್ಕಂಡ ತರಗತಿಗಳ ಪ್ರಕಾರ ಹಣ ಕೊಟ್ಟವರು ಆಯಾ ತರಗತಿಯ ಸದಸ್ಯರೆಂಬು ತಿಳಿಯತಕ್ಕದು.

## ೨. ಮಹಾಸಭೆಯ ಘಟನೆ.

(೪) **ಮಹಾಸಭೆಗೆ:—** (೧) ಮಧ್ಯವರ್ತೀ ಮಂಡಲ (೨) ಕಾರ್ಯಕಾರೀ ಕಮೀಟಿ (೩) ೮ ಪ್ರಾಂತಿಕ ಮಂಡಗಳು ಇರತಕ್ಕದ್ದು. ಪ್ರಾಂತಿಕ ಮಂಡಲಗಳು ಮತ್ತು ಅವುಗಳಿಗೆ ಇರತಕ್ಕ ಮಧ್ಯವರ್ತೀ ಮಂಡಲದಲ್ಲಿಯ ಸ್ಥಳಗಳು ಕೆಳಗೆ ಕಾಣಿಸಿದಂತೆ ಇರತಕ್ಕದ್ದು.

೧. ಮುಂಬಯಿ ಇಲಾಖಾ ದಕ್ಷಿಣ ವಿಭಾಗ (ಧಾರವಾಡ, ಬೆಳಗಾವ, ವಿಜಾಪುರ, ಕಾರವಾರ, ಜಿಲ್ಹೆಗಳು) ೧೧

೨ ಮುಂಬಯಿ ಇಲಾಖಾ ಮಧ್ಯ ಮತ್ತು ಉತ್ತರ ವಿಭಾಗಗಳು (ಸೊಲ್ಲಾಪುರ ಜಿಲ್ಹೆ, ಕೊಂಕಣ ಮುಂಬಯಿ ಸಾತಾರಾ ಇತ್ಯಾದಿ ) ೪

೩. ಮೈಸೂರ ಸಂಸ್ಥಾನ ೮

೪. ಕೊಡಗು ೧

೫. ಮದ್ರಾಸ ಇಲಾಖೆ ೫
೬. ನಿಜಾಮ ಇಲಾಖೆ ೯
೭. ವರ್ಹಾಡ ಮಧ್ಯಪ್ರಾಂತ ಮತ್ತು ಇತರ ಹಿಂದುಸ್ಥಾನ ೩
೮. ಮುಂಬಯಿ ಇಲಾಖೆಯೊಳಗಿನ ಸಂಸ್ಥಾನಗಳು ೫

ಒಟ್ಟು ೪೫

(೫) ಮಹಾಸಭೆಯ ಅಧಿವೇಶನದ ಅಧ್ಯಕ್ಷರು ಮುಂದಿನ ಅಧಿವೇಶನದ ವರೆಗೆ ಮಧ್ಯವರ್ತಿ ಮಂಡಲದ ಅಧ್ಯಕ್ಷರು ಇರತಕ್ಕದ್ದು. ಸ್ವಾಗತ ಮಂಡಲದ ಚೇರಮನ್ನರು ಆದರ ಉಪಾಧ್ಯಕ್ಷರು ಇರತಕ್ಕದ್ದು. ಮಹಾಸಭೆಯ ಅಧ್ಯಕ್ಷರು ತಮ್ಮ ಈ ಸ್ಥಾನದಲ್ಲಿದ್ದುಕೊಂಡು ಕಾರ್ಯ ಮಾಡಲು ಇಚ್ಛಿಸದಿದ್ದರೆ ಅವರು ತಮ್ಮ ಪರವಾಗಿ ಬೇರೊಬ್ಬರನ್ನು ಈ ಸ್ಥಾನದಲ್ಲಿ ಬೇಕಾದಾಗ ನೇಮಿಸಬಹುದು.

(೬) ಪ್ರಾಂತಿಕ ಮಂಡಲದಲ್ಲಿ ಇರತಕ್ಕ ಸದಸ್ಯರ ಸಂಖ್ಯೆ, ಅವುಗಳ ಸ್ಥಾನಗಳು, ಅವುಗಳು ತಮ್ಮ ಕಾರ್ಯಗಳನ್ನು ನಡಿಸುವ ಪದ್ಧತಿ ಇವೇ ಮೊದಲಾದವುಗಳ ಬಗ್ಗೆ ಉಪನಿಯಮಗಳನ್ನು ಮಹಾ ಸಭೆಯ ನಿಯಮಗಳಿಗೆ ಬಾಧೆ ಬರದಂತೆ ಮಧ್ಯವರ್ತಿ ಮಂಡಳದ ಒಪ್ಪಿಗೆಯಿಂದ ಆಯಾ ಪ್ರಾಂತಿಕ ಮಂಡಲಗಳು ಏರ್ಪಡಿಸಿಕೊಂಡು ಆ ಪ್ರಕಾರ ವರ್ತಿಸತಕ್ಕದ್ದು.

(೭) ಮಧ್ಯವರ್ತಿ ಮಂಡಲದಲ್ಲಿ ಆಯಾ ಪ್ರಾಂತಗಳಿಗೋಸ್ಕರ ೪ ನೇ ನಿಯಮದಲ್ಲಿ ವಿವರಿಸಿದಂತೆ ಸಭಾಸದರನ್ನು ಆಯಾ ಪ್ರಾಂತಿಕ ಮಂಡಲಗಳು ತಮ್ಮ ಉಪನಿಯಮಗಳಿಗನುಸರಿಸಿ ಆರಿಸಿ ಅವರ ಹೆಸರುಗಳನ್ನು ಮಧ್ಯವರ್ತಿ ಮಂಡಲದ ಅಧ್ಯಕ್ಷರ ಕಡೆಗೆ ಕಳಿಸಿಕೊಡತಕ್ಕದ್ದು. ಅವರು ಮಹಾಸಭೆಯ ಮಧ್ಯವರ್ತಿ ಮಂಡಲದ ಸಭಾಸದರಾಗುವರು.

(೮) ಒಂದುವೇಳೆ ಯಾವದಾದರೂ ಪ್ರಾಂತಿಕ ಮಂಡಲ ಅಥವಾ ಮಂಡಲಗಳು ನಿಯಮ ೭ ರ ಮೇರೆಗೆ ಮಧ್ಯವರ್ತಿ ಮಂಡಲದ ಸದಸ್ಯರನ್ನು ಆರಿಸದೆ ಹೋದರೆ ಆ ಪ್ರಾಂತಿಕ ಮಂಡಲಗಳ ಪರವಾಗಿ ಮಹಾಸಭೆಗೆ ಬಂದ ಪ್ರತಿನಿಧಿಗಳು ಸಭೆಯ ಕಾಲಕ್ಕೆ ತಮ್ಮ ಪ್ರಾಂತಕ್ಕೆ ಗೊತ್ತುಪಡಿಸಲ್ಪಟ್ಟಷ್ಟು ಸದಸ್ಯರನ್ನು ಆರಿಸತಕ್ಕದ್ದು ಇವರು ಮಹಾಸಭೆಯ ಮಧ್ಯವರ್ತಿ ಮಂಡಲದ ಸದಸ್ಯರಾಗಿ ಎಣಿಸಲ್ಪಡುವರು.

(೯) ಮಧ್ಯವರ್ತಿ ಮಂಡಳವು ಏರ್ಪಟ್ಟ ಬಳಿಕ ಹೊಸ ಸಭಾಸದರು ನಿಯಮಗಳ ಪ್ರಕಾರ ನಿಯಮಿಸಲ್ಪಡುವ ವರೆಗೆ ಮೊದಲು ನಿಯಮಿಸಲ್ಪಟ್ಟ ಸಭಾಸದರೇ ಮಹಾಸಭೆಯ ಮಧ್ಯವರ್ತಿ ಮಂಡಲದ ಸಭಾಸದರೆಂದು ತಿಳಿಯಲ್ಪಡುವರು.

(೧೦) ಮಧ್ಯವರ್ತೀ ಮಂಡಲದಲ್ಲಿ ಯಾವದೇ ಕಾರಣದಿಂದ ಸ್ಥಳವು ಅಥವಾ ಸ್ಥಳಗಳು ತೆರವು ಬಿದ್ದರೆ ಅಥವಾ ತುಂಬಲ್ಪಡದೆ ಹೋದರೆ, ಅದರ ಉಳಿದ ಸಭಾಸದರು ಆ ಸ್ಥಳ ಅಥವಾ ಸ್ಥಳಗಳಿಗೋಸ್ಕರ ಆ ಭಾಗದಲ್ಲಿಯ ಸದಸ್ಯರನ್ನು ಬೇಕಾದಾಗ ಆರಿಸಿ ತುಂಬಬಹುದು

(೧೧) ಕಾರ್ಯಕಾರೀ ಕಮೀಟಿಯಲ್ಲಿ ೯ ರಿಂದ ೧೬ರ ವರೆಗೆ ಸಭಾಸದರು ಇರತಕ್ಕದ್ದು.

(೧೨) ಮಹಾಸಭೆಯ ಅಧ್ಯಕ್ಷರು ಕಾರ್ಯಕಾರೀ ಕಮೀಟಿಗೆ ಚೇರಮನ್ನರಾಗಿರತಕ್ಕದ್ದು. ಇಲ್ಲದಿದ್ದರೆ ಅವರು ತಮ್ಮ ಪರವಾಗಿ ಬೇರೊಬ್ಬರನ್ನು ಈ ಸ್ಥಾನಕ್ಕೆ ಬೇಕಾದಾಗ ನೇಮಿಸಬಹುದು.

(೧೩) ಕಾರ್ಯಕಾರೀ ಕಮೀಟಿಯ ಸಭಾಸದರನ್ನು ಮಧ್ಯವರ್ತೀ ಮಂಡಳವು ನೇಮಿಸತಕ್ಕದ್ದು. ಈ ಕಮೀಟಿಯಲ್ಲಿ ವಿಶಿಷ್ಟ ಪ್ರಾಂತದವರಿರಬೇಕು. ಮತ್ತು ಅವರ ಸಂಖ್ಯೆಯು ಪ್ರಾಂತಾನುಸಾರ ಇಂತಿಷ್ಟೇ ಇರಬೇಕು ಎಂಬ ನಿರ್ಬಂಧವಿಲ್ಲ.

(೧೪) ಮಧ್ಯವರ್ತೀ ಮತ್ತು ಕಾರ್ಯಕಾರೀ ಮಂಡಳಗಳ ಸಭಾಸದರು ಮಹಾಸಭೆಯ ೩ನೇ ನಿಯಮದ ಪ್ರಕಾರ ಮಹಾಸಭೆಯ ಸದಸ್ಯರಾಗಿರತಕ್ಕದ್ದು.

(೧೫) ಕಾರ್ಯಕಾರೀ ಕಮೀಟಿಯ ಸಭೆಗಳಲ್ಲಿ ಯಾರಾದರೂ ಸಭಾಸದರು ಒಂದೇ ಸವನೆ ಮೂರು ಸಭೆಗಳಿಗೆ ಬಾರದಿದ್ದಲ್ಲಿ ಅವರು ತಮ್ಮ ಸದಸ್ಯತ್ವವನ್ನು ಕಳೆದು ಕೊಳ್ಳುವರು.

(೧೬) ಕಾರ್ಯಕಾರೀ ಕಮೀಟಿಯಲ್ಲಿ ಯಾವದೇ ಕಾರಣದಿಂದ ಸ್ಥಳವು ತೆರವು ಉಳಿದಲ್ಲಿ ಅಥವಾ ಬಿದ್ದಲ್ಲಿ ಅದರ ಉಳಿದ ಸಭಾಸದರು ಬೇರೊಬ್ಬರನ್ನು ಈ ಸ್ಥಳದಲ್ಲಿ ಬೇಕಾದ ಕಾಲದಲ್ಲಿ ನೇಮಿಸಿಕೊಳ್ಳಬಹುದು.

(೧೭) ಕಾರ್ಯಕಾರೀ ಕಮೀಟಿಯವರು ತಮಗೆ ಯೋಗ್ಯ ಕಂಡ ಪ್ರಕಾರ ಮಹಾಸಭೆಯ ನಿರ್ಣಯಗಳನ್ನು ಪ್ರಚಾರದಲ್ಲಿ ತರಲು ಸಹಾಯಕ ಕಮೀಟಿಗಳನ್ನು ನೇಮಿಸಿಕೊಳ್ಳಬಹುದು. ಹೀಗೆ ನೇಮಿಸಲ್ಪಟ್ಟ ಕಮೀಟಿಗಳು ಕಾರ್ಯಕಾರೀ ಕಮೀಟಿಗೆ ಅಧೀನವಾಗಿ ಕೆಲಸ ಮಾಡತಕ್ಕದ್ದು.

(೧೮) ಕಾರ್ಯಕಾರೀ ಕಮೀಟಿಯ ಸಭೆಗಳನ್ನು ಕರೆಯುವದರಲ್ಲಿ ಚೇರಮನ್ನರು ೮ ದಿವಸಗಳ ಅವಧಿಯನ್ನಿಟ್ಟು ಬೇಕಾದ ಸ್ಥಳದಲ್ಲಿ ಕರೆಯಬಹುದು. ಆಗ ಕೋರಂ ಆಗದಿದ್ದರೆ ಮುಂದಿನ ಸಭೆಯಲ್ಲಿ ಬಂದಷ್ಟು ಸಭಾಸದರಲ್ಲಿ ಕಾರ್ಯಗಳನ್ನು ಜರಗಿಸತಕ್ಕದ್ದು.

(೧೯) ಕಾರ್ಯಕಾರೀ ಕಮೀಟಿಯು ಹೊಸ ಕಾರ್ಯಕಾರೀ ಕಮೀಟಿಯು ಸ್ಥಾಪಿಸಲ್ಪಡುವ ವರೆಗೆ ಕಾರ್ಯ ಮಾಡತಕ್ಕದ್ದು.

## ೩. ಮಹಾಸಭೆಯ ಧನನಿಧಿ.

(೨೦) ಮಹಾಸಭೆಯ ಧನನಿಧಿಗಳು ಕೆಳಗೆ ಕಾಣಿಸಿದ ಪ್ರಕಾರವು ಇರುತ್ತವೆ:—

೧. ಚಿರಸ್ಥಾಯಿ ಫಂಡು, ೨ ಬಳಿಕೆಯ ಫಂಡು, ೩ ವಿಶಿಷ್ಟ ಫಂಡುಗಳು, ೩ನೇ ಕಲಮಿನ ಅ, ಬ, ಪ್ರಕಾರ ಬಂದ ಹಣವು ಮಹಾಸಭೆಯ ಚಿರಸ್ಥಾಯಿ ಫಂಡು ಎನಿಸಿಕೊಳ್ಳಲ್ಪಡುವದು. (ಕ) ಸದಸ್ಯರಿಂದ ಬಂದ ಹಣವು ಬಳಿಕೆಯ ಫಂಡು ಎನಿಸಿಕೊಳ್ಳುವದು. ಮಹಾಸಭೆಯ ಕಾರ್ಯಗಳನ್ನು ಮತ್ತು ಉದ್ದೇಶಗಳನ್ನು ನೆರವೇರಿಸಲಿಕ್ಕೆ ವ್ಯಕ್ತಿಗಳು ಅಥವಾ ಸಂಘಗಳು ವಿಶಿಷ್ಟ ಶರ್ತುಗಳಿಂದ ಕೊಟ್ಟ ದೇಣಿಗೆಗಳು ಅಥವಾ ವರ್ಗಣಿಗಳು ವಿಶಿಷ್ಟ ಫಂಡುಗಳೆನಿಸಿಕೊಳ್ಳುವವು

(೨೧) ಮಹಾಸಭೆಯು ಧನನಿಧಿಗಳ ಆಡಳಿತವು ಕಾರ್ಯಕಾರೀಮಂಡಲದ ವ್ಯವಸ್ಥೆಗೆ ಒಳಪಟ್ಟಿರತಕ್ಕದ್ದು.

(೨೨) ಚಿರಸ್ಥಾಯೀ ಫಂಡಿನ ಮೂಲ ಧನವನ್ನು ಕಾರ್ಯಕಾರೀ ಕಮೀಟಿಯ ಠರಾವಿನಂತೆ ಸರಕಾರೀ ಅಥವಾ ಸಹಕಾರೀ ( ಕೋ-ಅಪರೇಟಿವ್ಹ ) ಬ್ಯಾಂಕುಗಳಲ್ಲಿ ಇಡತಕ್ಕದ್ದು. ಅಥವಾ ಅದರಿಂದ ಸರಕಾರೀ ಅಥವಾ ಸಹಕಾರೀ ( ಕೋ-ಆಪರೇಟಿವ್ಹ) ಸಿಕ್ಯೂರಿಟಿಗಳನ್ನು ಕೊಳ್ಳಬಹುದು. ಈ ಫಂಡಿನ ವಾರ್ಷಿಕ ಬಡ್ಡಿಯನ್ನು ಅಥವಾ ಅದರ ಭಾಗವನ್ನು ಕಾರ್ಯಕಾರೀ ಕಮೀಟಿಯವರು ಮಹಾಸಭೆಯ ಅಧಿವೇಶನದ ವೆಚ್ಚಕ್ಕಾಗಿ ಅಥವಾ ಮಹಾಸಭೆಯ ಉದ್ದೇಶಗಳನ್ನು ನೆರವೇರಿಸಲಿಕ್ಕಾಗಿ ವಿನಿಯೋಗಿಸತಕ್ಕದ್ದು.

(೨೩) ಬಳಿಕೆಯ ಫಂಡನ್ನು ಆಯಾ ಪ್ರಾಂತಿಕ ಮಂಡಲದವರು ತಮ್ಮ ಪ್ರಾಂತದ ಸಭಾಸದರಿಂದ ವಸೂಲ ಮಾಡತಕ್ಕದ್ದು. ಆಯಾ ಪ್ರಾಂತದ ಬಳಿಕೆಯ ಫಂಡುಗಳು ಆಯಾ ಪ್ರಾಂತದ ಪ್ರಾಂತಿಕ ಮಂಡಲದ ಆಡಳಿತದಲ್ಲಿ ಇರತಕ್ಕದ್ದು. ಈ ಮಂಡಲಗಳು ತಮ್ಮ ಈ ಫಂಡಿನ ¾ ಭಾಗವನ್ನು ಮಹಾಸಭೆಯ ನಿರ್ಣಯಗಳನ್ನು ನಡವಳಿಕೆಯಲ್ಲಿ ತರಲಿಕ್ಕೂ ಮಹಾಸಭೆಯ ಉದ್ದೇಶಕ್ಕನುಸರಿಸಿ ಇತರ ಪ್ರಚಾರ ಕಾರ್ಯ ಮಾಡಲಿಕ್ಕೂ ವೆಚ್ಚ ಮಾಡಲಿಕ್ಕೆ ಇಟ್ಟುಕೊಂಡು ಉಳಿದ ¼ ಭಾಗವನ್ನು ಮಹಾ ಸಭೆಯ ಕಾರ್ಯಕಾರೀ ಮಂಡಲಕ್ಕೆ ಕೊಡತಕ್ಕದ್ದು. ಹೀಗೆ ಯಾವತ್ತೂ ಪ್ರಾಂತಿಕ ಮಂಡಲಗಳಿಂದ ಬಂದ ಹಣವನ್ನೂ ನಿಯಮ ೪೯ ಪ್ರಕಾರ ವೀರಶೈವ ಮಹಾಸಭೆಯ ಅಧಿವೇಶನದ ಸ್ವಾಗತಮಂಡಲದಿಂದ ಬಂದ ಹಣವನ್ನೂ ಚಿರಸ್ಥಾಯಿ ಫಂಡಿನಿಂದ ಬಂದ ಬಡ್ಡಿಯಲ್ಲಿ ವೆಚ್ಚವಾಗಿ ಉಳಿದ ಭಾಗವನ್ನೂ ಬಂದ ಇತರ ದೇಣಿಗೆಗಳನ್ನೂ ಕಾರ್ಯ

ಕಾರೀ ಕಮೀಟಿಯವರು ಮಹಾಸಭೆಯ ಉದ್ದೇಶಕ್ಕನುಸಾರವಾಗಿ ಉಪಯೋಗಿಸತಕ್ಕದ್ದು. ವಿಶಿಷ್ಟ ಫಂಡುಗಳ ವ್ಯವಸ್ಥೆಯ ಬಗ್ಗೆ ಕಾರ್ಯಕಾರೀ ಕಮೀಟಿಯವರು ಹಣ ಕೊಟ್ಟವರೊಡನೆ ಮಾಡಿದ ವಿಶೇಷ ಶರ್ತುಗಳ ಪ್ರಕಾರ ಉಭಯತರು ವರ್ತಿಸತಕ್ಕದ್ದು.

## (೪) ಮಧ್ಯವರ್ತಿ ಮಂಡಳ ಮತ್ತು ಕಾರ್ಯಕಾರೀ ಕಮೀಟಿಗಳ ಕರ್ತವ್ಯಗಳು.

(೨೪) ಮಹಾಸಭೆಯಲ್ಲಿ ಆದ ನಿರ್ಣಯಗಳನ್ನು ಕಾರ್ಯಕಾರೀ ಕಮೀಟಿಯವರು ತಮ್ಮ ಕಮೀಟಿಯ ಅಥವಾ ತಮ್ಮ ಸಹಾಯಕ ಕಮೀಟಿಗಳ ಮುಖಾಂತರವಾಗಲಿ ಅಥವಾ ಪ್ರಾಂತಿಕ ಜಿಲ್ಹಾ ತಾಲೂಕ ಅಥವಾ ಗ್ರಾಮ ಕಮೀಟಿಗಳ ಮುಖಾಂತರವಾಗಲಿ ಪ್ರಚಾರದಲ್ಲಿ ತರಲು ಪ್ರಯತ್ನಿಸತಕ್ಕದ್ದು.

(೨೫) ಮಧ್ಯವರ್ತೀ ಮಂಡಳದ ಸಾಮಾನ್ಯ ನಿರ್ದರ್ಶನದಲ್ಲಿ ಕಾರ್ಯಕಾರೀ ಕಮೀಟಿಯವರು ಮಹಾಸಭೆಯ ಯಾವತ್ತುಕಾರ್ಯಗಳನ್ನು ಮಾಡತಕ್ಕದ್ದು.

(೨೬) ಮಧ್ಯವರ್ತಿ ಮಂಡಳದಲ್ಲಿ ವಿಚಾರಕ್ಕೆ ಬರುವಂಥ ವಿಷಯಗಳು ಕಾರ್ಯಕಾರೀ ಕಮೀಟಿಯಲ್ಲಿ ಮೊದಲು ಚರ್ಚಿಸಲ್ಪಟ್ಟು ನಿರ್ಣಯಗಳಾಗತಕ್ಕದ್ದು. ಮತ್ತು ಮಧ್ಯವರ್ತಿ ಮಂಡಳದ ನಿರ್ಣಯಗಳು ಕಾರ್ಯಕಾರೀ ಕಮೀಟಿಯ ಮುಖಾಂತರವಾಗಿಯೇ ಎಲ್ಲ ಕಡೆಗೆ ಪ್ರಚಾರದಲ್ಲಿ ತರಲ್ಪಡತಕ್ಕದ್ದು.

(೨೭) ಕಾರ್ಯಕಾರೀ ಕಮೀಟಿಯ ಯಾವವಾದರೂ ನಿರ್ಣಯಗಳು ಮಧ್ಯವರ್ತೀ ಮಂಡಳ ಅಥವಾ ಕಾರ್ಯಕಾರೀ ಕಮೀಟಿ ಇವುಗಳ ಸಭಾಸದರಿಗೆ ಒಪ್ಪಿಗೆಯಾಗದ ಪಕ್ಷದಲ್ಲಿ ಅದರ ಮೇಲೆ ಅಪೀಲುಗಳು ಮೇಲ್ಕಂಡ ನಿರ್ಣಯಗಳಾದ ಬಳಿಕ ಒಂದು ತಿಂಗಳಿನೊಳಗೆ ಅವರಿಂದ ಮಧ್ಯವರ್ತೀ ಮಂಡಳಕ್ಕೆ ಮಾಡಲ್ಪಡತಕ್ಕದ್ದು. ಹೀಗೆ ಮಾಡಿದ ಅಪೀಲಿನ ಕೊನೆಯ ನಿರ್ಣಯವಾಗುವ ವರೆಗೂ ಕಾರ್ಯಕಾರೀ ಕಮೀಟಿಯ ನಿರ್ಣಯಗಳು ಅಥವಾಕಾರ್ಯಗಳು ತಡೆಯಲ್ಪಡತಕ್ಕದ್ದು. ಮಧ್ಯವರ್ತೀ ಮಂಡಳದ ನಿರ್ಣಯವೇ ಕೊನೆಯ ನಿರ್ಣಯವೆಂದು ತಿಳಿದು ಕಾರ್ಯಕಾರೀ ಕಮೀಟಿಯವರು ಅದರಂತೆ ನಡೆಯತಕ್ಕದ್ದು.

(೨೮) ಮಹಾಸಭೆಗೆ ಅಂಗವಾಗಿ ನಿಯಮಿಸಲ್ಪಟ್ಟ ಎಲ್ಲ ಮಂಡಲಗಳು ಕಾರ್ಯಕಾರೀ ಮಂಡಲಕ್ಕೆ ಅಧೀನವಾಗಿ ತಮ್ಮಕಾರ್ಯಗಳನ್ನು ಜರಗಿಸತಕ್ಕದ್ದು.

(೨೯) ಪ್ರಾಂತಿಕ ಮಂಡಲದವರು ತಾವು ಮಾಡಿದ ಕಾರ್ಯಗಳ ವಿವರಗಳನ್ನೂ ವರದಿಗಳನ್ನೂ ತಮ್ಮ ಲೆಖ್ಖಪತ್ರಗಳನ್ನೂ ಪ್ರತಿವರ್ಷ ಕಾರ್ಯ

ಕಾರೀ ಮಂಡಲದವರಿಗೆ ಒಪ್ಪಿಸತಕ್ಕದ್ದು. ಇವುಗಳನ್ನೂ ತಾವು ಮಾಡಿದ ಕಾರ್ಯಗಳ ವಿವರಗಳನ್ನೂ ಕಾರ್ಯಕಾರೀ ಕಮೀಟಿಯವರು ಪ್ರತಿವರ್ಷ ಪ್ರಸಿದ್ಧಿಸತಕ್ಕದ್ದು.

(೩೦) ಕಾರ್ಯಕಾರೀ ಮತ್ತು ಮಧ್ಯವರ್ತೀ ಮಂಡಲಗಳು ಮಹಾಸಭೆಯ ಅಧಿವೇಶನವು ಪ್ರತಿ ವರ್ಷ ಯಾವದಾದರೊಂದು ಸ್ಥಳದಲ್ಲಿ ಜರಗುವಂತೆ ವ್ಯವಸ್ಥೆ ಮಾಡತಕ್ಕದ್ದು.

(೩೧) ಕಾರ್ಯಕಾರೀ ಕಮಿಟಿಯವರು ಮಹಾಸಭೆಯ ಅಧಿವೇಶನವು ಯಾವ ಸ್ಥಳದಲ್ಲಿ ನಡೆಯತಕ್ಕದ್ದಿರುವದೋ ಅಲ್ಲಿಯ ಅಧಿವೇಶನದ ಸಲುವಾಗಿ ಒಟ್ಟು ಖರ್ಚು ಎಷ್ಟಾಗುವದೆಂಬದರ ಬಗ್ಗೆ ಅಲ್ಲಿಯ ಸ್ವಾಗತ ಮಂಡಲದವರಿಂದ ವರದಿಯನ್ನು ತರಿಸಿಕೊಂಡು ಚಿರಸ್ಥಾಯಿ ಫಂಡಿನ ಉತ್ಪನ್ನದೊಳಗಿಂದ ಯೋಗ್ಯಹಣವನ್ನು ಮಂಜೂರ ಮಾಡತಕ್ಕದ್ದು.

## (೫) ಪ್ರಾಂತಿಕ ಮಂಡಲಗಳ ಕರ್ತವ್ಯಗಳು.

(೩೨) ಪ್ರಾಂತಿಕ ಮಂಡಲದವರು ಮಹಾಸಭೆಯ ಎಲ್ಲ ತರಗತಿಗಳ ಸದಸ್ಯರನ್ನು ಹೆಚ್ಚಿಸಲಿಕ್ಕೆ ಪ್ರಯತ್ನ ಮಾಡತಕ್ಕದ್ದು. ಮತ್ತು ಅವರಿಂದ ದೇಣಿಗೆಗಳನ್ನೂ ವರ್ಗಣಿಗಳನ್ನೂ ಎತ್ತತಕ್ಕದ್ದು. ಮತ್ತು ಆಶ್ರಯದಾತರ ಮತ್ತು ಆಜೀವ ಸದಸ್ಯರ ದೇಣಿಗೆ ಹಣವನ್ನು ದೊರಕಿಸಿ ಕಾರ್ಯಕಾರೀ ಕಮೀಟಿಯ ಅಧ್ಯಕ್ಷರ ಕಡೆಗೆ ಕಳಿಸಿಕೊಡತಕ್ಕದ್ದು. ಸಾಮಾನ್ಯ ಸದಸ್ಯರ ವಾರ್ಷಿಕ ವರ್ಗಣಿಯ ಹಣದ ಮೂರು ನಾಲ್ಕಾಂಶ ಭಾಗವನ್ನು ತಾವು ಇಟ್ಟುಕೊಂಡು ಉಳಿದ ಒಂದು ನಾಲ್ಕಾಂಶ ಭಾಗವನ್ನು ಕಾರ್ಯಕಾರೀ ಮಂಡಲಿಯ ಅಧ್ಯಕ್ಷರ ಕಡೆಗೆ ಕಳಿಸತಕ್ಕದ್ದು. ಮತ್ತು ತಮ್ಮ ಪ್ರಾಂತದಲ್ಲಿ ಮಹಾಸಭೆಯ ಕಾರ್ಯಗಳನ್ನು ಜರಗಿಸಲು ಯತ್ನಿಸತಕ್ಕದ್ದು.

(೩೩) (ಅ) ಮಹಾಸಭೆಯ ಅಧಿವೇಶನಕ್ಕೆ ಆಯಾಯ ಪ್ರಾಂತಿಕ ಮಂಡಲದವರು ೪೩ ನೇ ನೇಮದ ಪ್ರಕಾರ ಸದಸ್ಯರಿಂದ ಪ್ರತಿನಿಧಿಗಳನ್ನು ಆರಿಸಿ ಅವರ ಹೆಸರುಗಳನ್ನು ಸ್ವಾಗತ ಮಂಡಲಕ್ಕೆ ತಿಳಿಸುವ ವ್ಯವಸ್ಥೆ ಮಾಡತಕ್ಕದ್ದು. (ಬ) ಮತ್ತು ಮುಂದಿನ ವರ್ಷದ ಬಗ್ಗೆ ತಮ್ಮ ಉಪನಿಯಮಗಳ ಪ್ರಕಾರ ಪ್ರಾಂತಿಕ ಕಾರ್ಯಕಾರೀ ಮಂಡಳಗಳನ್ನು ನೇಮಿಸಿ ಅವರ ಹೆಸರುಗಳನ್ನು ಮಹಾಸಭೆಯ ಕಾರ್ಯಕಾರೀ ಮಂಡಳಕ್ಕೆ ತಿಳಿಸತಕ್ಕದ್ದು. (ಕ) ಯಾವದೇ ಕಾರಣದಿಂದ ಪ್ರಾಂತಿಕ ಕಮೀಟಿಯು ಅಲ್ಲಿಯ ಸದಸ್ಯರಿಂದ ಸ್ಥಾಪಿಸಲ್ಪಡದೆ ಹೋದರೆ ಮಹಾಸಭೆಯು ಸೇರಿದ ಕಾಲಕ್ಕೆ ಆ ಆ ಪ್ರಾಂತದ

ಪ್ರತಿನಿಧಿಗಳು ಮಧ್ಯವರ್ತಿ ಮಂಡಳಕ್ಕೋಸ್ಕರ ತಮ್ಮ ಪರವಾಗಿ ನೇಮಿಸಿದ ಪ್ರತಿನಿಧಿಗಳೇ ನಿಯಮಾನುಸಾರ ಅದು ನೇಮಿಸಲ್ಪಡುವ ವರೆಗೆ ಆ ಪ್ರಾಂತದ ಪ್ರಾಂತಿಕ ಮಂಡಲವೆಂದು ತಿಳಿಯತಕ್ಕದ್ದು.

(೩೪) ಪ್ರಾಂತಿಕ ಮಂಡಲದವರು ತಮ್ಮ ಆಡಳಿತೆಯಲ್ಲಿದ್ದ ಫಂಡಿನ ಲೆಕ್ಕವನ್ನು ಇಟ್ಟು ಆಯವ್ಯಯ ಪತ್ರಿಕೆಯನ್ನು ಕಾರ್ಯಕಾರೀ ಮಂಡಲದ ಕಡೆಗೆ ಪ್ರತಿ ವರ್ಷ ಕಳಿಸತಕ್ಕದ್ದು.

## (೬) ಮಹಾಸಭೆಯ ಅಧಿವೇಶನದ ಬಗ್ಗೆ ನಿಯಮಗಳು.

(೩೫) ಮಹಾಸಭೆಯ ಅಧಿವೇಶನವನ್ನು ಜರುಗಿಸಲಿಚ್ಛಿಸುವವರು ತಮ್ಮ ಜಿಲ್ಹೆಯ ಅಥವಾ ಪ್ರಾಂತದ ಪ್ರಮುಖ ಜನರ ಒಪ್ಪಿಗೆಯಿಂದ ಒಂದು ವರ್ಕಿಂಗ ಕಮೀಟಿಯನ್ನು ತಮ್ಮ ತಮ್ಮಲ್ಲಿ ಮೊದಲು ನೇಮಿಸಿಕೊಳ್ಳತಕ್ಕದ್ದು. ಈ ಕಮಿಾಟಿಯವರು ಕಾರ್ಯಕಾರೀ ಕಮೀಟಿಯ ಮುಖಾಂತರ ಮಧ್ಯವರ್ತೀಮಂಡಳದೊಡನೆ ಪತ್ರವ್ಯವಹಾರ ನಡಿಸಿ ಯಾವ ವರ್ಕಿಂಗ ಕಮೀಟಿಗೆ ಮಧ್ಯವರ್ತಿ ಮಂಡಳದ ಅನುಮತಿಯು ದೊರೆಯುವದೋ ಆ ಕಮೀಟಿಯೇ ಮಹಾಸಭೆಯ ಅಧಿವೇಶನದ ಕಾರ್ಯಗಳನ್ನು ಕೈಕೊಳ್ಳತಕ್ಕದ್ದು.

(೩೬) ಈ ಸ್ಥಾನಿಕ ವರ್ಕಿಂಗ ಕಮೀಟಿಯವರು ಒಬ್ಬ ಚೇಅರಮನ್ನನನ್ನೂ ತಮಗೆ ಬೇಕಾಗುವಷ್ಟು ಸೆಕ್ರೆಟರಿಗಳನ್ನೂ ಸಬ್ ಕಮೀಟಿಗಳನ್ನೂ ಆರಿಸಿಕೊಳ್ಳತಕ್ಕದ್ದು. ಮತ್ತು ಆದಷ್ಟು ತೀವ್ರ ಸ್ವಾಗತ ಕಮೀಟಿಯನ್ನು ಮಾಡಿ ತಮ್ಮ ಕಮೀಟಿಯನ್ನು ಸ್ವಾಗತಮಂಡಲವಾದ ನಂತರ ರದ್ದು ಮಾಡತಕ್ಕದ್ದು ಆ ಜಿಲ್ಹೆಯ ಅಥವಾ ಪ್ರಾಂತದ ಆಶ್ರಯದಾತರೂ ಆಜೀವ ಸದಸ್ಯರೂ ಸ್ವಾಗತ ಮಂಡಲದ ಸದಸ್ಯರಿರತಕ್ಕದ್ದು ಸ್ವಾಗತ ಮಂಡಲದ ಉಳಿದ ಸದಸ್ಯರು ಪ್ರತಿಯೊಬ್ಬರು ೧೦ ರೂಪಾಯಿ ಅಥವಾ ಅದಕ್ಕೂ ಹೆಚ್ಚಾದ ದೇಣಿಗೆಯನ್ನು ಕೊಡತಕ್ಕದ್ದು, ಇವರೇ ಸ್ವಾಗತ ಮಂಡಲದ ಚೇಅರಮನ್ನರನ್ನೂ ಅವಶ್ಯಕ ಕಮೀಟಿಗಳನ್ನೂ ಮಾಡಿಕೊಂಡು ಮಹಾಸಭೆಯ ಮುಂದಿನ ಕಾರ್ಯಗಳನ್ನು ಜರುಗಿಸತಕ್ಕದ್ದು.

(೩೭) ಮಹಾಸಭೆಯ ಅಧ್ಯಕ್ಷರನ್ನು ಆರಿಸುವಲ್ಲಿ ಸ್ವಾಗತ ಕಮಿಾಟಿಯವರು ಈ ಬಗ್ಗೆ ಕಾರ್ಯಕಾರೀ ಕಮೀಟಿಯ ಮುಖಾಂತರವಾಗಿ ಮಧ್ಯವರ್ತಿ ಮಂಡಲದೊಡನೆ ಪತ್ರವ್ಯವಹಾರ ನಡಿಸತಕ್ಕದ್ದು. ಇದರಲ್ಲಿ ಕಾರ್ಯಕಾರೀ ಮಂಡಲದವರ ಸಲಹೆಯನ್ನು ಮಧ್ಯವರ್ತಿ ಮಂಡಲದವರು ತೆಗೆದುಕೊಂಡು ಕೆಲವು ಸಭ್ಯಗೃಹಸ್ಥರ ಹೆಸರುಗಳನ್ನು ಸ್ವಾಗತ ಮಂಡಲದವರಿಗೆ ಸೂಚಿಸತಕ್ಕದ್ದು. ಅವರಲ್ಲಿ ಒಬ್ಬರನ್ನು ಮಹಾಸಭೆಯ ಅಧ್ಯಕ್ಷರನ್ನಾಗಿ ಸ್ವಾಗತ ಮಂಡ

ಳದವರು ಆರಿಸತಕ್ಕದ್ದು. ಹೀಗೆ ಆರಿಸುವಲ್ಲಿ ಈ ಸ್ವಾಗತಮಂಡಳದವರು ಮಧ್ಯವರ್ತಿ ಮಂಡಳಕ್ಕೆ ಅಧ್ಯಕ್ಷರ ಬಗ್ಗೆ ಮೊದಲು ಬರೆದಾಗ್ಗೆ ತಮ್ಮ ಮಂಡಳದಲ್ಲಿ ಯಾರು ಸಭಾಸದರಿದ್ದರೋ ಅವರಿಗಷ್ಟೇ ಈ ಬಗ್ಗೆ ಮತಕೊಡುವ ಅಧಿಕಾರವಿದೆ. ಮತ್ತು ಅಧ್ಯಕ್ಷರನ್ನು ಆರಿಸುವ ಕಾಲಕ್ಕೆ ಈ ಸಭಾಸದರಿಗೆ ಕನಿಷ್ಟ ೮ ದಿವಸಗಳ ನೋಟೀಸು ಕೊಡತಕ್ಕದ್ದು.

(೩೮) ಅಧಿವೇಶನದ ವೆಚ್ಚಕ್ಕೆ ಚಿರಸ್ಥಾಯಿ ಫಂಡಿನಿಂದ ದೊರೆತ ಹಣವನ್ನೂ ಸ್ವಾಗತ ಕಮೀಟಿಯು ಸದಸ್ಯರ, ಪ್ರತಿನಿಧಿಗಳ, ಮತ್ತು ಪ್ರೇಕ್ಷಕರ ಕಡೆಯಿಂದ ಬಂದ ಹಣವನ್ನೂ ಉಪಯೋಗಿಸತಕ್ಕದ್ದು.

(೩೯) ಮಹಾಸಭೆಯು ಅಧಿವೇಶನವು ತೀರಿದ ೧ ತಿಂಗಳ ಒಳಗಾಗಿ ತಮ್ಮ ಆಯವ್ಯಯದ ಲೆಖ್ಖವನ್ನು ಸ್ವಾಗತ ಕಮೀಟಿಯವರು ಕಾರ್ಯಕಾರೀ ಮಂಡಲಕ್ಕೆ ಒಪ್ಪಿಸತಕ್ಕದ್ದು. ಮತ್ತು ಖರ್ಚು ಹೋಗಲಾಗಿ ಉಳಿದ ಹಣವನ್ನು ಕಾರ್ಯಕಾರೀ ಮಂಡಲದ ಕಡೆಗೇ ಕಳಿಸತಕ್ಕದ್ದು.

(೪೦) ಆಶ್ರಯದಾತರು ಮತ್ತು ಆಜೀವ ಸದಸ್ಯರು ಆಯಾ ಪ್ರಾಂತಗಳ ಪರವಾಗಿ ಮಹಾಸಭೆಗೆ ಪ್ರತಿನಿಧಿಗಳೆಂದು ತಿಳಿಯುತಕ್ಕದ್ದು. ಇವರು ಪ್ರತಿನಿಧಿಗಳು ಕೊಡಬೇಕಾದ ಫೀ ಹಣ ಕೊಡಬೇಕಾಗುವದಿಲ್ಲ. ಉಳಿದ ಪ್ರತಿನಿಧಿಗಳು ಪ್ರತಿಯೊಬ್ಬರು ೫ ರೂಪಾಯಿ ಫೀ ಕೊಡಬೇಕಾಗುವದು. ಪ್ರೇಕ್ಷಕರು ೩ ರೂಪಾಯಿ ಫೀ ಕೊಡಬೇಕಾಗುವದು.

(೪೧) ಮಹಾಸಭೆಯು ಪ್ರಾರಂಭವಾಗುವ ಪೂರ್ವದಲ್ಲಿ ಮಧ್ಯವರ್ತಿ ಮಂಡಳವು ಸಭೆ ಸೇರಿ ವಿಷಯನಿಯಾಮಕ ಕಮೀಟಿಯಲ್ಲಿ ಪ್ರಾಂತಾನುಸಾರ ಎಷ್ಟು ಜನ ಸಭಾಸದರು ಇರತಕ್ಕದ್ದೆಂಬದನ್ನು ನಿರ್ಧರಿಸತಕ್ಕದ್ದು. ಈ ಸಭಾಸದರು ಪ್ರಾಂತಾನುಸಾರವಾಗಿ ಮಧ್ಯವರ್ತೀ ಮಂಡಳಿಯಲ್ಲಿ ಯಾವ ಪ್ರಮಾಣದಿಂದ ಸಭಾಸದರು ಇರುವರೋ ಅದೇ ಪ್ರಮಾಣದಷ್ಟೇ ಇರತಕ್ಕದ್ದು. ಹೀಗೆ ಗೊತ್ತುಪಡಿಸಿದಷ್ಟೇ ಸಭಾಸದರನ್ನು ಮಹಾಸಭೆಗೆ ಆಯಾ ಪ್ರಾಂತದ ಪ್ರತಿನಿಧಿಗಳು ಆರಿಸಿ ಮಹಾಸಭೆಯ ಅಧ್ಯಕ್ಷರಿಗೆ ತಿಳಿಸತಕ್ಕದ್ದು. ಇವರೇ ವಿಷಯನಿಯಾಮಕ ಕಮೀಟಿಯ ಸಭಾಸದರಾಗುವರು ವಿಷಯನಿಯಾಮಕ ಕಮಿಟಿಯಲ್ಲಿ ಚರ್ಚಿಸಲ್ಪಟ್ಟ ವಿಷಯಗಳೇ ಮಹಾಸಭೆಯಲ್ಲಿ ನಿರ್ಣಯಿಸಲ್ಪಡತಕ್ಕದ್ದು.

## ೭. ತಾಲೂಕ ಜಿಲ್ಲಾ ಮತ್ತು ಗ್ರಾಮ ಕಮೀಟಿಗಳು.

(೪೨) ಮಹಾಸಭೆಯ ನಿರ್ಣಯಗಳನ್ನು ಪ್ರಚಾರದಲ್ಲಿ ತರಲು ನಿಯಮಿಸಲ್ಪಟ್ಟ ಗ್ರಾಮ ತಾಲೂಕ ಮತ್ತು ಜಿಲ್ಲಾ ಕಮೀಟಿಯವರು ವರ್ಗಣಿಯು

ನ್ನು ಕೂಡಿಸಿ ಆಗಿಂದಾಗ್ಗೆ ತಮ್ಮ ಪ್ರಾಂತಿಕ ಕಮೀಟಿಯ ಕಡೆಗೆ ಹಣವನ್ನು ಮತ್ತು ತಮ್ಮ ಕೆಲಸದ ವರದಿಯನ್ನು ಮತ್ತು ಆಯವ್ಯಯದ ಪತ್ರಿಕೆಯನ್ನು ಕಳಿಸತಕ್ಕದ್ದು. ಮತ್ತು ಆಯಾಯ ತಾಲೂಕ ಜಿಲ್ಲಾ ಮತ್ತು ಗ್ರಾಮ ಕಮೀಟಿಗಳು ತಮ್ಮ ವೆಚ್ಚಕ್ಕಾಗಿ ಬೇಕಾಗ ಬಹುದಾದ ಹಣವನ್ನು ಪ್ರಾಂತಿಕ ಕಮೀಟಿಯವರು ನಿರ್ಣಯಿಸಿದ ಮೇರೆಗೆ ತೆಗೆದುಕೊಳ್ಳತಕ್ಕದ್ದು.

(೪೩) ಗ್ರಾಮ, ತಾಲೂಕು, ಅಥವಾ ಜಿಲ್ಲಾ ಕಮೀಟಿಯವರು ತಮ್ಮಲ್ಲಿಯ ಆಶ್ರಯದಾತರು ಅಜೀವ ಸದಸ್ಯರು ಹಾಗೂ ಸಾಮಾನ್ಯ ಸದಸ್ಯರು ಇವರ ಸಭೆಸೇರಿಸಿ ಮಹಾಸಭೆಯ ಪ್ರತಿನಿಧಿಗಳನ್ನು ಮಹಾಸಭೆಯ ಅಧಿವೇಶನದ ೧ ತಿಂಗಳ ಮುಂಚೆ ಆರಿಸಿ ಮಹಾಸಭೆಯ ಸ್ವಾಗತ ಮಂಡಲಕ್ಕೆ ಕಳಿಸಬೇಕು. ಈ ಪ್ರಕಾರ ಇವರು ಆರಿಸದೆ ಹೋದರೆ, ಪ್ರಾಂತಿಕ ಕಮೀಟಿಯ ಸಭಾಸದರೇ ಪ್ರತಿನಿಧಿಗಳನ್ನು ಆರಿಸಿ ಸ್ವಾಗತ ಮಂಡಲಕ್ಕೆ ಅವರ ಹೆಸರು ತಿಳಿಸತಕ್ಕದ್ದು.

## ೮ ಲೆಖ್ಖಪತ್ರ ತಪಾಸಣಿ.

(೪೪) ಆಯಾ ಕಮೀಟಿಯವರು ಮತ್ತು ಮಂಡಳದವರು ಅವಶ್ಯಕ ಲೆಖ್ಖಪತ್ರಗಳನ್ನು ಇಡುವ ಬಗ್ಗೆ ನಿಯಮಗಳನ್ನು ಮಾಡಿ ಆ ಪ್ರಕಾರ ವ್ಯವಸ್ಥೆ ಮಾಡತಕ್ಕದ್ದು.

(೪೫) ಯಾವದೇ ಕಮೀಟಿಯವರು ತಮ್ಮ ಕಡೆಗೆ ಯಾವದೇ ರೂಪದಿಂದ ಬಂದ ಹಣವನ್ನು ಆಗಿಂದಾಗ್ಗೆ ಸರಕಾರೀ ಅಥವಾ ಸಹಕಾರೀ [ಕೋ-ಆಪರೇಟವ್ಹ] ಬ್ಯಾಂಕುಗಳಲ್ಲಿ ಇಡತಕ್ಕದ್ದು.

## ೯ ಸಾಮಾನ್ಯ ನಿಯಮಗಳು.

(೪೬) ಪ್ರತ್ಯೇಕ ಮಂಡಲದ ಅಥವಾ ಕಮೀಟಿಯ ಸಭೆಯಲ್ಲಿ ಕನಿಷ್ಟ ಪಕ್ಷಕ್ಕೆ ೧/೪ ಸದಸ್ಯರು ಹಾಜರಾದರೆ ಸಭೆಯ ಕೆಲಸವನ್ನು ಜರಗಿಸಲಿಕ್ಕೆ ಅಡ್ಡಿ ಇಲ್ಲ. ಇಷ್ಟು ಜನರು ಹಾಜರ ಇಲ್ಲದಿದ್ದರೆ ಸಭೆಯನ್ನು ನಿಯಮಿತ ತಾರೀಖಿಗೆ ಮುಂದುವರಿಸಬೇಕು. ಆ ತಾರೀಖಿಗೆ ಹಾಜರಿದ್ದ ಸದಸ್ಯರು ಸಭೆಯ ಕೆಲಸವನ್ನು ಜರುಗಿಸತಕ್ಕದ್ದು.

(೪೭) ಮಹಾಸಭೆಯಲ್ಲಿ (೧) ಆಶ್ರಯದಾತರು (೨) ಅಜೀವ ಮತ್ತು ಸಾಮಾನ್ಯ ಸದಸ್ಯರು ಹಾಗೂ (೩) ಪ್ರತಿನಿಧಿಗಳು ಇವರಿಗೆ ಮಾತ್ರ ಮತ ಕೊಡುವ ಅಧಿಕಾರವಿರುತ್ತದೆ. ಯಾವತ್ತೂ ಮಂಡಲಗಳ ಅಥವಾ ಕಮೀಟಿಗಳ ಸದಸ್ಯರಿಗೆ ಪ್ರತಿಯೊಬ್ಬರಿಗೆ ಒಂದು ಮತವಿರುವದು ಸಭೆಗಳಲ್ಲಿ ಭಿನ್ನಾಭಿಪ್ರಾಯಗಳಿಗೆ ಸಮಾನ ಸಂಖ್ಯೆಗಳ ಮತಗಳು ಬಂದಾಗ ಅಧ್ಯಕ್ಷರಿಗೆ ಅಧ

ವಾ ಚೇಅರಮನ್ನರಿಗೆ ಹೆಚ್ಚಿನ ಒಂದು ಮತ (*Casting vote*) ಕೊಡುವ ಅಧಿಕಾರವಿರುತ್ತದೆ.

(೪೮) ಪ್ರತ್ಯೇಕ ಮಂಡಲದವರು ಅಥವಾ ಕಮೀಟಿಯವರು ತಮ್ಮ ಕಾರ್ಯಗಳನ್ನು ಜರುಗಿಸಲಿಕ್ಕೆ ಮೇಲ್ಕಂಡ ನಿಯಮಗಳಿಗೆ ವಿರೋಧ ಬಾರದ ಹಾಗೆ ಪೋಟ ನಿಯಮಗಳನ್ನು ಮಾಡಿಕೊಳ್ಳಬಹುದು.

(೪೯) ಪ್ರತ್ಯೇಕ ಮಂಡಲವು ಅಥವಾ ಕಮಿಟಿಯು ತಮ್ಮ ಕಾರ್ಯ ನಿರ್ವಾಹಕ್ಕಾಗಿ ಕಾಲಕಾಲಕ್ಕೆ ಅವುಗಳ ಚೇಅರಮನ್ನರಿಂದ ಅನುಕೂಲ ಸ್ಥಳಗಳಲ್ಲಿ ಕರೆಯಲ್ಪಡತಕ್ಕದ್ದು.

(೫೦) ಮೇಲಿನ ನಿಯಮಗಳಲ್ಲಿ ಹೆಚ್ಚು ಕಡಿಮೆ ಮಾಡುವ ಅಧಿಕಾರವು ಮಹಾಸಭೆಗೆ ಇರುವದು.

ಫ. ಗು. ಹಳಕಟ್ಟಿ,
ಚೇಅರಮನ್
ಮಧ್ಯವರ್ತಿ ಮಂಡಳ
ಶ್ರೀಮದ್ವೀರಶೈವ ಮಹಾಸಭೆ.



# ಅಖಿಲಭಾರತ ವೀರಶೈವ ಮಹಾಸಭಾ ಚಿರಸ್ಥಾಯಿ ಫಂಡ ಕಮೀಟಿಯ ಘಟನೆ.



ಅಖಿಲಭಾರತ ವೀರಶೈವ ಮಹಾಸಭಾ ಚಿರಸ್ಥಾಯಿ ಫಂಡ ಕಮೀಟಿಯ ಸಾಧಾರಣ ಸಭೆಯು ತಾ|| ೨೬—೧೧—೧೯೨೨ ನೇ ದಿವಸ ಕೂಡಿ ಮಂಜೂರ ಮಾಡಿದ ಈ ಸಂಸ್ಥೆಯ ಘಟನೆಯು ಕೆಳಗೆ ಬರೆದಂತೆ ಅದೆ.

೧. ಸಾಧ್ಯವಾದ ಮಟ್ಟಿಗೂ ಅಖಿಲಭಾರತ ವೀರಶೈವ ಮಹಾಸಭೆಯನ್ನು ವರ್ಷೇ ವರ್ಷೇ ನಡೆಯುವಂತೆ ಮಾಡುವದೇ ಈ ನಿಧಿಯ ಉದ್ದೇಶವು.

೨. ಈ ನಿಧಿಯ ಮೂಲಧನವನ್ನು ಯಾವುದೊಂದು ಕಾರ್ಯಕ್ಕೂ ವಿನಿಯೋಗಿಸತಕ್ಕದ್ದಲ್ಲ.

೩. ಈ ನಿಧಿಯಿಂದ ಬಂದ ವೃಧ್ಯಂಶವನ್ನು ಬಳಸುವದಕ್ಕೆ ಜನರಲ್ಲ ಕಮಿಟಿಯವರಿಗೆ ಅಧಿಕಾರವಿರತಕ್ಕದ್ದು.

೪. ಇದರ ಮೂಲಧನವು ಮೈಸೂರ ಸರಕಾರದ ಸಾಲಪತ್ರಗಳಲ್ಲಿ ಇಡಲಾಗಿದೆ. ಮುಂದೆ ವಸೂಲಾಗುವ ಸಹಾಯ ಧನವನ್ನು ಸಹ ಮೈಸೂರ ಗವರ್ನಮೆಂಟ ಸಾಲಪತ್ರಗಳಲ್ಲಿ ಇಡಬಹುದು; ಇಲ್ಲವೆ, ಮೈಸೂರ ಗವರ್ನಮೆಂಟ ಸೇವಿಂಗ್ಸ ಬ್ಯಾಂಕಿನಲ್ಲಿ ಇಡಬಹುದು. (೨೧—೧೧—೧೯೨೧ ರಲ್ಲಿ ನಡೆದ ಜನರಲ್ಲಿ ಕಮೀಟಿಯ ತೀರ್ಮಾನವನ್ನು ನೋಡಿ.)

ಇವುಗಳಿಂದ ಹುಟ್ಟುವಳಿಯಾದ ಬಡ್ಡಿಯನ್ನು ಅಧ್ಯಕ್ಷರ ಹೆಸರಿನಲ್ಲಿ ಮೈಸೂರು ಬ್ಯಾಂಕಿನ ಕರೆಂಟ ಡಿಪಾಜಿಟ್ಟಾಗಿ ಇರಿಸತಕ್ಕದ್ದು.

೫. ಜನರಲ್ ಕಮೀಟಿ:—

(೧) ಈ ಮಹಾಸಭೆಯ ಸಹಾಯನಿಧಿಯ ಮೇಲ್ವಿಚಾರಣೆಯು ಜನರಲ್ಲ ಕಮೀಟಿಯವರಿಗೆ ಮಾತ್ರ ಕೊಡಲ್ಪಟ್ಟಿರುತ್ತದೆ. ಈ ಕಮೀಟಿಯಲ್ಲಿ ೧,೦೦೦ ರೂಪಾಯಿಗಳಿಗೆ ಕಡಿಮೆ ಇಲ್ಲದಂತೆ ಸಹಾಯ ಧನವನ್ನು ಕೊಟ್ಟಿರುವ ಎಲ್ಲ ಮೆಂಬರುಗಳು ಪತ್ತು ಮುಂದೆ ಕೊಡತಕ್ಕವರೂ ಸೇರುತ್ತಾರೆ. ಇವರಿಗೆ ಈ ನಿಧಿಯ ಮೇಲ್ವಿಚಾರಣೆಗಾಗಿ ಅವಶ್ಯಕವಾದ ಕಟ್ಟಳೆಗಳನ್ನು ಏರ್ಪಡಿಸುವದಕ್ಕೂ ಕಾರ್ಯಕ್ರಮಗಳನ್ನು ನಡೆಸುವದಕ್ಕೂ ಅಧಿಕಾರವಿದೆ. (೨೦-೧೧-೧೯೨೧ ರಲ್ಲಿ ನಡೆದ ಜನರಲ್ಲ ಕಮೀಟಿಯ ತೀರ್ಮಾನವನ್ನು ನೋಡಿ.)

(೨) ಜನರಲ್ಲ ಕಮೀಟಿಯ ಸದಸ್ಯರ ಕನಿಷ್ಟ ಸಂಖ್ಯಾ ಪರಿಮಿತಿಯು ೧೦ ಆಗಿರಬೇಕು ಈ ಮೀಟಿಂಗುಗಳಲ್ಲಿ ಹಾಜರಿರುವ ಮೆಂಬರುಗಳ ಪೈಕಿ ಬರಬಹುದಾದ ಭಿನ್ನಾಭಿಪ್ರಾಯಗಳಿಗೆ ಸಮಾನ ಸಂಖ್ಯೆಯ ಓಟುಗಳೇ ಬಂದಾಗ, ಅಧ್ಯಕ್ಷರಿಗೆ ಒಂದು ಹೆಚ್ಚಿಗೆ ಓಟು ಕೊಡುವ ಅಧಿಕಾರವಿರತಕ್ಕದ್ದು.

(೩) ಕನಿಷ್ಟ ಪರಿಮಿತಿಯ ಸದಸ್ಯರಾದರೂ ಹಾಜರಿಲ್ಲದೆ ಮೀಟಿಂಗ್ ಮತ್ತೊಂದು ಗೊತ್ತಾದ ತಾರೀಖಿಗೆ ನಡೆಯತಕ್ಕದೆಂದು ನಿಲ್ಲಿಸಲ್ಪಟ್ಟಮೇಲೆ ಗೊತ್ತಾದ ಆ ತಾರೀಖಿನಲ್ಲಿ ಸದಸ್ಯರ ಕನಿಷ್ಟ ಪರಿಮಿತಿ ಇಲ್ಲದಿದ್ದರೂ ಕೂಡ ಮೀಟಿಂಗಿನ ಕೆಲಸ ಕಾರ್ಯಗಳು ಮುಂದರಿಸಲ್ಪಡತಕ್ಕದ್ದು.

(೪) ಜನರಲ್ ಕಮಿಟಿಯವರು ವರ್ಷಕ್ಕೊಮ್ಮೆ ಸಭೆ ಸೇರತಕ್ಕದು.

(೫) ಸಹಾಯ ನಿಧಿಯಿಂದ ಉತ್ಪತ್ತಿಯಾಗುವ ಹಣವು ಸಹಾಯ ನಿಧಿಯ ಉದ್ದೇಶ ಸಾಧನೆಗೆ ಆವಶ್ಯಕವಾದುದಕ್ಕಿಂತಲೂ ಹೆಚ್ಚಾಗಿರುವುದೆಂದು ತೋರಿಬಂದಾಗ ಹಾಗೆ ಹೆಚ್ಚಾದ ಹಣವನ್ನು ಸ್ವಮತೀಯರ ಏಳಿಗೆಯನ್ನು ವೃದ್ಧಿಪಡಿಸಬಹುದಾದ ಕೆಲಸಗಳಿಗೆ ವಿನಿಯೋಗಿಸಲು ಜನರಲ್ ಕಮಿಟಿಯವರು ಅಧಿಕಾರ ಹೊಂದಿರುತ್ತಾರೆ.

(೬) ೧೯೦೪ನೇಯ ಇಸವಿ ಮೈಸೂರು ಸೊಸೈಟಿ ರೆಗ್ಯುಲೇಷನ್ ೩ ರ ಪ್ರಕಾರ ಸಹಾಯಕರ್ತರ ಜನರಲ್ ಕಮಿಟಿಯು ರಜಿಸ್ಟರಾಗತಕ್ಕದ್ದು.

(೭) ಅಧಿಕಾರಿ ವರ್ಗದವರು (೨೦-೧೧-೧೯೩೧ರಲ್ಲಿ ನಡೆದ ತೀರ್ಮಾನವನ್ನು ನೋಡಿ):—

ಅಧ್ಯಕ್ಷರು:— ದಿವಾನ್ ಬಹದ್ದೂರ್ ರಾಜಸಭಾಭೂಷಣ ಕೆ. ಪಿ. ಪುಟ್ಟಣ್ಣಶೆಟ್ಟಿ, ಸಿ. ಐ. ಇ. ಯವರು.

ಕಾರ್ಯದರ್ಶಿ:— ಮ|| ರಾ|| ಪಿ. ಮಹದೇವಯ್ಯ, ಬಿ. ಎ., ಬಿ. ಎಲ್., ಅವರು.

ಸಹಾಯಕ ಕಾರ್ಯದರ್ಶಿ:— ಮ|| ರಾ|| ಜಿ. ಕೆ. ರುದ್ರಾರ್ಯರವರು

೩. ಕಾರ್ಯನಿರ್ವಾಹಕ ಮಂಡಲಿಯ ಅಧಿಕಾರಗಳು:—

(೧) ಈ ಮಹಾಸಭೆಯನ್ನು ಪ್ರತಿವರ್ಷವೂ ನೆರವೇರುವಂತೆ ಮಾಡಬೇಕೆಂಬುವುದೇ ಈ ಸಹಾಯ ನಿಧಿಯ ಉದ್ದೇಶವಾದುದರಿಂದ ಕಾರ್ಯನಿರ್ವಾಹಕ ಮಂಡಲಿಯವರು ಜನರಲ್ ಕಮಿಟಿಯವರ ಮಂಜೂರಾತಿಗೆ ಒಳಪಟ್ಟ ಮಹಾಸಭೆಯನ್ನು ನಡೆಸತಕ್ಕ ಬಗ್ಗೆ ತಮಗೆ ಸೂಕ್ತ ತೋರುವ ಧನ ಸಹಾಯವನ್ನು ಕೊಡಬಹುದು ಕಾರಣಾಂತರಗಳಿಂದ ಒಂದು ವರ್ಷದಲ್ಲಿ ಮಹಾ ಸಭೆಯು ನಡೆಯದೆ ನಿಂತುಹೋದಮೇಲೆ ಮಾರನೇ ವರ್ಷವೂ ನಡೆಯಬಹುದೆಂಬ ಭರವಸೆ ತೋರದೆ ಹೋದ ಪಕ್ಷದಲ್ಲಿ ಕಾರ್ಯನಿರ್ವಾಹಕ ಮಂಡಲಿಯವರು ಆ

ಮೂರನೇ ವರ್ಷದಲ್ಲಿ ಮಹಾಸಭೆಯನ್ನು ಕೂಡಿಸಲು ಅವಶ್ಯಕವಾದ ಆರಂಭ ಕಾರ್ಯ ಕಲಾಪಗಳನ್ನು ಜನರಲ್ ಕಮಿಟಿಯವರ ಒಪ್ಪಿಗೆಗೆ ಒಳಪಟ್ಟು ನಡೆಯಿಸಬಹುದು.

(೨) ಯಾವ ಪ್ರಾಂತ್ಯದಲ್ಲೇ ಆಗಲಿ ಮಹಾಸಭೆಯನ್ನು ನೆರವೇರಿಸಬೇಕೆಂದು ಬರೆದು ಬರುವ ವಿನಂತಿಗಳನ್ನು ಈ ಸಭೆಯು ಇತ್ಯರ್ಥಪಡಿಸಬಹುದು. ಆದರೆ ಈ ಇತ್ಯರ್ಥವು ಜನರಲ್ ಕಮಿಟಿ ಮೆಂಬರುಗಳ ಒಪ್ಪಿಗೆಗೆ ಒಳಪಟ್ಟಿರತಕ್ಕದ್ದು. ಅವಶ್ಯಕ ಕಂಡುಬಂದರೆ, ಜನರಲ್ ಕಮಿಟಿ ಮೆಂಬರುಗಳ ಅಭಿಪ್ರಾಯವನ್ನು ಟಪ್ಪಾಲು ಮೂಲಕವಾಗಿ ತರಿಸಿಕೊಳ್ಳಬಹುದು.

(೩) ಮಹಾಸಭೆಯು ಹೀಗೆ ಹೀಗೆಯೇ ನಡಿಯತಕ್ಕುದೆಂಬ ಬಗ್ಗೆ ಅವಶ್ಯಕವಾದ ಯಾವ ಷರತ್ತುಗಳನ್ನು ಬೇಕಾದರೂ ವಿಧಿಸಲು ಈ ಸಭೆಗೆ ಸಂಪೂರ್ಣಾಧಿಕಾರ ವಿರತಕ್ಕದ್ದು. ಇಂತಹ ಷರತ್ತುಗಳಿಗೆಲ್ಲಾ ಸ್ವಾಗತ ಮಂಡಲಿಯವರು ಬದ್ಧರಾಗಿರತಕ್ಕದು.

(೪) ಮಹಾಸಭೆಗಳಲ್ಲಿ, ದ್ರವ್ಯ ಸಹಾಯಮಾಡಿದ ದೊಡ್ಡಮನುಷ್ಯರಿಗೆ ಗೌರವಾರ್ಥವಾಗಿ ಸ್ಥಳಗಳನ್ನು ಬೇರ್ಪಡಿಸಿರುವುದಕ್ಕೆ ಬೇಕಾದ ಸನ್ನಾಹಗಳನ್ನು ಮಾಡಬಹದು.

(೫) ಈ ಕಮಿಟಿಯು ಕಾರ್ಯನಿರ್ವಾಹಕ್ಕಾಗಿ ಕನಿಷ್ಟಪಕ್ಷ ೪ ತಿಂಗಳಿಗೊಂದುಬಾರಿಯಾದರೂ ಸಭೆ ಸೇರತಕ್ಕದ್ದು.

(೬) ಕಾರ್ಯನಿರ್ವಾಹಕ ಮಂಡಲಿಯು ದ್ರವ್ಯ ಸಹಾಯಮಾಡಿದ ದೊಡ ಮನುಷ್ಯರ ಪೈಕಿ ೧೦ ಮಂದಿಯನ್ನು ಒಳಗೊಂಡಿರತಕ್ಕದ್ದು. ಇಂತಹ ೧೦ ಮಂದಿಯ ಚುನಾವಣೆಯು ಮೂರು ವರ್ಷಕೊಂದುಬಾರಿ ನಡೆಯತಕ್ಕದ್ದು ಮಧ್ಯೆ ಸದಸ್ಯರ ಸ್ಥಾನವು ಬಿಡತಿಯಾದಾಗ ಉಳಿದ ಮೆಂಬರುಗಳು ಸಹಾಯ ದ್ರವ್ಯ ಕೊಟ್ಟವರ ಪೈಕಿ ಯಾರನ್ನಾದರೂ ಆ ಸ್ಥಳಕ್ಕೆ ಚುನಾಯಿಸಿಕೊಳ್ಳಬಹುದು.

(೭) ಕಾರ್ಯದರ್ಶಿ ಮತ್ತು ಸಹಾಯಕ ಕಾರ್ಯದರ್ಶಿಗಳ ಚುನಾವಣೆಯೂ ಸಹ ೩ ವರ್ಷಕ್ಕೊಮ್ಮೆ ನಡೆಯತಕ್ಕದ್ದು. ಈ ಸ್ಥಾನಗಳು ಬಿಡತಿಯಾದಂತೆಲ್ಲಾ ಕಾರ್ಯನಿರ್ವಾಹಕ ಮಂಡಲಿಯವರು ಆ ಸ್ಥಳಕ್ಕೆ ಬೇರೆಯವರನ್ನು ನಿಯಮಿಸತಕ್ಕದ್ದು.

(೮) ಕಾರ್ಯನಿರ್ವಾಹಕ ಮಂಡಲಿಯವರು ವರ್ಷ ಒಂದಕ್ಕೆ ೩೫೦ ರೂಪಾಯಿಗಳಿಗೆ ಮೀರದೆ ವೆಚ್ಚಮಾಡಲು ಅಧಿಕಾರ ಹೊಂದಿರತಕ್ಕದ್ದು.

(೯) (೩) ಮಹಾಸಭೆಯು ನಡೆದ ೩ ತಿಂಗಳೊಳಗಾಗಿ ಸ್ವಾಗತ ಮಂಡಲಿಯವರು ಆಯಾ ಮಹಾಸಭೆಗೆ ಸಂಬಂಧಪಟ್ಟು ವಸೂಲಾಗಿ ಬಂದ ಸಹಾಯ

ದ್ರವ್ಯ, ಪ್ರತಿನಿಧಿಗಳಿಂದಲೂ ಪ್ರೇಕ್ಷಕರಿಂದಲೂ ಬಂದ ರುಸುಮು, ಮಹಾಸಭೆಯ ಸಹಾಯ ನಿಧಿಯಿಂದ ದೊರೆತ ಸಹಾಯ—ಇವೇ ಮೊದಲಾದ ಆಯವ್ಯಯಗಳನ್ನು ತೋರಿಸುವ ಲೆಖ್ಖವನ್ನು ಕಾರ್ಯನಿರ್ವಾಹಕ ಮಂಡಲಿಗೆ ಒಪ್ಪಿಸತಕ್ಕದ್ದು. ಖರ್ಚು ಜಾತ ಹೆಚ್ಚು ಹಣವು ಮಿಕ್ಕಿದ್ದ ಪಕ್ಷದಲ್ಲಿ ಮಹಾಸಭೆಯ ಸಹಾಯ ನಿಧಿಯಿಂದ ದೊರಕಿಸಿಕೊಂಡ ಚಂದಾಹಣವನ್ನು ಸಾಧ್ಯವಾದ ಮಟ್ಟಿಗೆ ಹಿಂತಿರುಗಿ ಕೊಡತಕ್ಕದ್ದು. ಈ ಷರತ್ತುಗಳನ್ನು ಕಾರ್ಯತಃ ಆಚರಣೆಗೆ ತರತಕ್ಕ ಬಗ್ಗೆ ಅವಶ್ಯಕವಾದ ಭರವಸೆಯನ್ನು ಕಾರ್ಯನಿರ್ವಾಹಕ ಮಂಡಲಿಯವರು ಪಡೆದುಕೊಳ್ಳಬಹುದು.

(b) ಪ್ರತಿಯೊಂದು ಮಹಾಸಭೆಯ ಕಾರ್ಯಕ್ರಮದ ಪಟ್ಟಿಯು ಕಾರ್ಯನಿರ್ವಾಹಕ ಮಂಡಲಿಯವರ ಅನುಮೋದನೆಗೆ ಒಳಪಟ್ಟಿರತಕ್ಕದ್ದು

(೧೦) ಮಹಾಸಭೆಯ ಸಹಾಯ ನಿಧಿಗಾಗಿ ವಾಗ್ದಾನವಾಗಿ ವಸೂಲ್ಬಾರದ ಮೊಬಲಗನ್ನು ವಸೂಲ್ಮಾಡಲು ಬೇಕಾದ ಏರ್ಪಾಡು ಮಾಡುವುದಕ್ಕೂ ಹೆಚ್ಚಿಗೆ ಸಹಾಯದ್ರವ್ಯ ಪಡೆಯಲು ತರದೂದ್ ನಡೆಸುವುದಕ್ಕೂ ಕಾರ್ಯನಿರ್ವಾಹಕ ಮಂಡಲಿಗೆ ಅಧಿಕಾರವಿರತಕ್ಕದ್ದು.

(೧೧) ಕಾರ್ಯನಿರ್ವಾಹಕ ಮಂಡಲಿಯ ಮೀಟಿಂಗುಗಳಿಗೆ ಕನಿಷ್ಟಪಕ್ಷ ೫ ಮಂದಿ ಸದಸ್ಯರಾದರೂ ಹಾಜರಿರತಕ್ಕದ್ದು ಈ ಮೀಟಿಂಗುಗಳಲ್ಲಿ ಹಾಜರಿರುವ ಮೆಂಬರುಗಳ ಪೈಕಿ ಬರಬಹುದಾದ ಭಿನ್ನಾಭಿಪ್ರಾಯಗಳಿಗೆ ಸಮಾನ ಸಂಖ್ಯೆಯ ಓಟುಗಳೇ ಬಂದಾಗ ಅಧ್ಯಕ್ಷರಿಗೆ ಒಂದು ಹೆಚ್ಚಿಗೆ ಓಟು ಕೊಡುವ ಅಧಿಕಾರ ವಿರತಕ್ಕದ್ದು.

(೧೨) ಕನಿಷ್ಟ ಪರಿಮಿತಿಯ ಸದಸ್ಯರಾದರೂ ಹಾಜರಿಲ್ಲದೆ ಮೀಟಿಂಗ್ ಮತ್ತೊಂದು ಗೊತ್ತಾದ ತಾರೀಖಿಗೆ ನಡೆಯತಕ್ಕದೆಂದು ನಿಲ್ಲಿಸಲ್ಪಟ್ಟ ಮೇಲೆ ಗೊತ್ತಾದ ಆ ತಾರೀಖಿನಲ್ಲಿ ಮೀಟಿಂಗಿನ ಕೆಲಸ ಕಾರ್ಯಗಳು ಸದಸ್ಯರ ಕನಿಷ್ಟ ಪರಿಮಿತಿ ಇಲ್ಲದಿದ್ದರೂ ಕೂಡ ಮುಂದರಿಸಲ್ಪಡತಕ್ಕದ್ದು.

(೧೩) ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರುಗಳು (೨೦—೧೧—೧೯೨೧ ರಲ್ಲಿ ಜನರಲ್ ಕಮಿಟಿಯವರು ಧನ ಸಹಾಯ ಮಾಡಿದವರ ಪೈಕಿ ಚುನಾಯಿಸಿದಂತೆ):—

೧. ರಾಜಸಭಾಭೂಷಣ ದಿವಾನ್ ಬಹದ್ದೂರ್ ಕೆ. ಪಿ. ಪುಟ್ಟಣ್ಣ ಶೆಟ್ಟಿ, ಸಿ. ಐ. ಇ. ಅಧ್ಯಕ್ಷರು,

೨. ಮ॥ ರಾ॥ ಪಟೇಲ್ ವಿರೂಪಾಕ್ಷಪ್ಪ, ಅಲಗಿಲವಾಡ, ಇವರ ಮಕ್ಕಳು ಮ॥ ಸಿದ್ದಲಿಂಗಪ್ಪನವರು,

೩. ಎಚ್. ಕೆ. ವೀರಬಸಯ್ಯ ಬಿ. ಎ, ಬಿ. ಎಲ್., ಅವರು,

೪. ಟಿ. ಎಂ. ಷಡಕ್ಷರಪ್ಪಯ್ಯನವರು,
೫. ಉರೇಕೊಂಡೆ ಚನ್ನಬಸಪ್ಪನವರು,
೬. ಟಿ. ರಾಜಪ್ಪನವರು,
೭. ಹರಿಹರದ ಮೂರುಕಲ್ಲು ರಾಜಪ್ಪನವರು,
೮. ಎಸ್. ಶಿವಪ್ಪನವರು;
೯. ಎಂ ನಾಗಪ್ಪನವರು.

೭ ಅಧ್ಯಕ್ಷರ ಅಧಿಕಾರಗಳು:—

(೧) ಅಧ್ಯಕ್ಷರು ಯಾವಾಗ ಬೇಕಾದರೂ ಅತ್ಯಗತ್ಯವಾದ ಕೆಲಸಗಳಿಗಾಗಿ ಜನರಲ್ ಕಮಿಟಿಯವರ ಅಥವಾ ಕಾರ್ಯನಿರ್ವಾಹಕ ಮಂಡಲಿಯವರ ವಿಶೇಷ ಸಭೆಯೊಂದನ್ನು ಸೇರಿಸಬಹುದು.

(೨) ಕಾಗದ ಪತ್ರಗಳನ್ನು ಮೆಂಬರುಗಳಿಗೆ ಕಳುಹಿಸಿಕೊಡುವುದರ ಮೂಲಕ, ಅವರವರ ಅಭಿಪ್ರಾಯಗಳನ್ನು ತರಿಸಿಕೊಳ್ಳುವುದು ಅತ್ಯವಶ್ಯಕವೆಂದಾಗಲಿ ಸೂಕ್ತವೆಂದಾಗಲಿ ಅಧ್ಯಕ್ಷರಿಗೆ ತೋರಿದಾಗ ಆರೀತಿ ಮಾಡಲು ಅವರಿಗೆ ಅಧಿಕಾರವಿರುತ್ತದೆ,

(೩) ಅಧ್ಯಕ್ಷರು ಸಹಾಯ ನಿಧಿಯ ಮೇಲೆ ಆಗಿಂದಾಗ ಕೂಡಿಬರುವ ಬಡ್ಡಿಯ ಮೊತ್ತವನ್ನು ಹಂಗಾಮಿಯಾಗಿ ವ್ಯಾಪಾರ ಕಾರ್ಯದಲ್ಲಿ ವಿನಿಯೋಗಿಸಲು ಅಧಿಕಾರ ಹೊಂದಿರುತ್ತಾರೆ.

೮ ಕಾರ್ಯದರ್ಶಿಯವರ ಕೆಲಸಗಳು:—

(೧) ಮೀಟಿಂಗುಗಳನ್ನು ಸೇರಿಸುವುದು.
(೨) ಪ್ರತಿಯೊಂದು ಮೀಟಿಂಗಿನ ನಡೆವಳಿಯನ್ನೂ ಬರೆದಿಡುವುದು.
(೩) ಆದಾಯ ವೆಚ್ಚಗಳ ಲೆಖ್ಖವಿಟ್ಟು ಕಾರ್ಯನಿರ್ವಾಹಕ ಮಂಡಲಿಗೆ ಒಪ್ಪಿಸುವುದು.
(೪) ವಾರ್ಷಿಕ ವರದಿಯನ್ನು ತಯಾರಿಸಿ ಜನರಲ್ ಕಮಿಟಿಯವರಿಗೆ ಒಪ್ಪಿಸುವುದು.

೯ ಸಹಾಯಕ ಕಾರ್ಯದರ್ಶಿಯವರ ಕೆಲಸಗಳು:—

ಕಾರ್ಯದರ್ಶಿಗಳಿಗೆ ಸಹಾಯಕರಾಗಿರುವುದು. ಚಂದಾ ಹಣವನ್ನು ವಸೂಲ್ಮಾಡಲು ತರದೂದು ನಡೆಸುವುದು.

೧೦ ಸಹಾಯ ದ್ರವ್ಯವನ್ನು ಕೊಟ್ಟವರಿಗೆ ತೋರಿಸುವ ರಿಯಾಯಿತಿಗಳು:—

(೧) ಮಹಾಸಭೆ ನಡೆಯುವಾಗ್ಗೆ ಪ್ರತಿನಿಧಿಗಳೂ ಪ್ರೇಕ್ಷಕರೂ ಕೊಡ

ಬೇಕೆಂದು ವಿಧಾಯಕವಾಗುವ ರುಸುಮನ್ನು ಸಹಾಯ ದ್ರವ್ಯವನ್ನು ಕೊಟ್ಟವರು ಕೊಡಬೇಕಾದುದಿಲ್ಲ.

(೨) ಎಲ್ಲಾ ಮಹಾಸಭೆಯ ವರದಿಗಳು, ಮಹಾಸಭೆಯ ಕಾರ್ಯಕ್ರಮಗಳು, ಮತ್ತು ಮಹಾಸಭೆಗೆ ಸಂಬಂಧಪಟ್ಟ ಎಲ್ಲ ಬಗೆಯಾದ ಪ್ರಕಟನೆಗಳು ಸಹಾಯ ದ್ರವ್ಯ ಕೊಟ್ಟವರಿಗೆ ಉಚಿತವಾಗಿ ಕೊಡಲ್ಪಡುವುವು.

(೩) ದ್ರವ್ಯ ಸಹಾಯ ಮಾಡಿದವರ ಪ್ರತಿನಿಧಿಯಾಗಿ ಅವರ ಕುಟುಂಬಕ್ಕೆ ಸೇರಿದ ಯಾರೊಬ್ಬ ಯುವಕರಾದರೂ ಮಹಾಸಭೆಗಳಿಗೂ ಕಮಿಟಿಗಳಿಗೂ ಬರಬಹುದು. ಈ ಸಂದರ್ಭದಲ್ಲಿ ಅವರ ವಾರ್ಸುದಾರರೂ, ಅವರಿಂದ ಅಧಿಕಾರ ಹೊಂದಿದವರೂ, ಪಾರುಪತ್ಯಗಾರರೂ, ಹವಾಲತೆ ಹೇಳಿಸಿಕೊಂಡವರು—ಇವರೆಲ್ಲರೂ ಸೇರಿರುವರು. ಈ ವಿಚಾರದಲ್ಲಿ ವಿವಾದಗಳೇನಾದರೂ ಉಂಟಾದಲ್ಲಿ ಕಾರ್ಯನಿರ್ವಾಹಕ ಮಂಡಲಿಯವರ ಇತ್ಯರ್ಥಕ್ಕೆ ಅವರು ಒಳಪಟ್ಟಿರಬೇಕು.

ಬೆಂಗಳೂರು ಸಿಟಿ,<br>೨೬—೧೧—೧೯೨೨

ಕೆ. ಪಿ. ಪುಟ್ಟಣ್ಣಶೆಟ್ಟಿ,<br>ಅಧ್ಯಕ್ಷರು,



## ಮಹನೀಯರುಗಳಿಂದ ಕೊಡಲ್ಪಟ್ಟ ಸಹಾಯ ದ್ರವ್ಯ.

| ಮ॥ ರಾ॥ ಶ್ರೀಗಳಾದ | ರೂ.. | ಆ. | ಪೈ. |
|---|---|---|---|
| (೧) ದಿವಾನ್ ಬಹದ್ದೂರ್ ರಾಜಸಭಾಭೂಷಣ ಸರ್ ಕೆ ಪಿ. ಪುಟ್ಟಣ್ಣಶೆಟ್ಟರು, ಕೆಟಿ., ಸಿ. ಐ. ಇ | ೧,೨೦೦ | ೦ | ೦ |
| (೨) ಆದಿಶೆಟ್ಟರ ಬಸವಲಿಂಗಪ್ಪನವರು, ದಾವಣಗೆರೆ | ೩,೦೦೫ | ೦ | ೦ |
| (೩) ಪತ್ರೆ ಸಿ. ವೀರಪ್ಪಯ್ಯನವರು, ಬೀರೂರು | ೩,೦೦೦ | ೦ | ೦ |
| (೪) ಟಿ. ಯಂ. ಷಡಕ್ಷರಪ್ಪಯ್ಯನವರು, ದಾವಣಗೆರೆ | ೧,೦೦೧ | ೦ | ೦ |
| (೫) ಉರೇಕೊಂಡೆ ಚನ್ನಬಸಪ್ಪನವರು, ದಾವಣಗೆರೆ | ೧,೦೦೫ | ೨ | ೦ |
| (೬) ಪಲ್ಲಗಟ್ಟೆ ಗುರುಸಿದ್ಧಪ್ಪನವರು, ದಾವಣಗೆರೆ | ೧,೦೦೫ | ೦ | ೦ |
| (೭) ಮಾಗನಹಳ್ಳಿ ಸಂಗಪ್ಪನವರು, ದಾವಣಗೆರೆ | ೧,೦೦೦ | ೦ | ೦ |
| (೮) ಗೌಡರ ಸಣ್ಣಮಹಲಿಂಗಪ್ಪನವರ ಗುರುಶಾಂತವನರು, ದಾವಣಗೆರೆ | ೧,೦೦೧ | ೦ | ೦ |
| (೯) ದೊಗ್ಗಹಳ್ಳಿ ಬಸವಣ್ಣಪ್ಪನವರು, ದಾವಣಗೆರೆ | ೧,೦೦೦ | ೦ | ೦ |
| (೧೦) ತಿಪ್ಪಣ್ಣನವರ ಮುರಗಪ್ಪನವರು, ಹರಿಹರ | ೧,೦೦೦ | ೦ | ೦ |
| (೧೧) ಮೂರುಕಲ್ಲು ಮಹಲಿಂಗಪ್ಪನವರ ರಾಜಪ್ಪನವರು, ಹರಿಹರ | ೧,೦೦೦ | ೦ | ೦ |
| (೧೨) ಸಾಹುಕಾರ್ ವೀರಭದ್ರಪ್ಪನವರು [illegible]ರುಸಿದ್ಧಪ್ಪನವರು ಮುಸ್ತ್ಯಗುಮ್ಮಿ, ಚಳ್ಳಕೆರೆ ತಾಲೂಕು | ೧,೦೦೫ | ೦ | ೦ |
| (೧೩) [illegible]ಕಾರ್ ಚಿಕ್ಕಹಳ್ಳಿ ಸಣ್ಣ ಶಿವಪ್ಪನವರು, ನನ್ನಿವಾಳ, ಚಳ್ಳಕೆರೆ ತಾಲೂಕ | ೧,೦೦೫ | ೦ | ೦ |
| (೧೪) ಸೀಗರಗಡ್ಡೆ ಯಸ್. ಶಿವಪ್ಪನವರು, ಬೆಂಗಳೂರ | ೧,೦೦೦ | ೦ | ೦ |
| (೧೫) ಟಿ. ರಾಚಪ್ಪನವರು, ಕಂಟ್ರಾಕ್ಟರ್, ಬೆಂಗಳೂರು | ೧,೦೦೦ | ೦ | ೦ |
| (೧೬) ಮಲ್ಲಿಕಾರ್ಜುನಪ್ಪನವರ ನಾಗಪ್ಪನವರು ಬೆಂಗಳೂರ | ೧,೨೦೦ | ೦ | ೦ |
| (೧೭) ವೈ. ಗರಡಿ ಚಿಕ್ಕವೀರಪ್ಪನವರು, ಬೆಂಗಳೂರ | ೧,೦೦೦ | ೦ | ೦ |
| (೧೮) ಜಿ. ಕೊಟ್ಟೂರಪ್ಪನವರ ಮಲ್ಲಪ್ಪನವರು, ತಿಪಟೂರ | ೧,೦೦೦ | ೦ | ೦ |
| (೧೯) ಕೇನಿ ಮಹದೇವಪ್ಪನವಳು, ಹಾಸನ | ೧,೦೦೦ | ೦ | ೦ |
| (೨೦) ಎ. ಎಸ್. ಶ್ರೀಕಂಠಪ್ಪನವರ ಶಿವನಂಜಪ್ಪನವರು, ಹಾಸನ | ೧,೦೦೦ | ೨ | ೦ |

ಮ|| ರಾ|| ಶ್ರೀಗಳಾದ

(೨೧) ಎ ಎಸ್. ನಂಜುಂಡಪ್ಪನವರು, ಹಾಸನ ಡಿಸ್ಟ್ರಿಕ್ ಆಲೂರ ೧,೦೦೦

(೨೨) ಜಿ. ಎಂ. ಕಾಡಪ್ಪನರು, ಶಿವಮೊಗ್ಗ ೧,೦೦೦

(೨೩) ಲಕ್ಷ್ಮೇಶ್ವರದ ಅಡವಪ್ಪನವರು ಮಲ್ಲಪ್ಪನವರು. ಹೊದಿಗೆರೆ, ಚೆನ್ನಗಿರಿ ತಾಲೂಕ ೧,೦೦೦

(೨೪) ಕೊರಿ ಅಡಿವೆಪ್ಪಶೆಟ್ಟ್ರು, ಸಾಗರ ೧,೦೦೦

(೨೫) ವಿಜಾಪುರದ ಬಸವಣ್ಣಪ್ಪನವರು, ಬನ್ನಿಕಲ್, ಬಳ್ಳಾರಿ ಡಿಸ್ಟ್ರಿಕ್ ೧,೦೦೦

(೨೬) ರಾವ್ ಸಾಹೇಬ್ ಶಿವಮೂರ್ತಿ ಸ್ವಾಮಿಯವರು, ಕಣಬುರ್ಗಿ ಮಠ ಬೆಳಗಾಂವ ೧,೦೦೦

(೨೭) ಮುಂಡಾಸದ ಸೊಣ್ಣಪ್ಪನವರ ವೀರಪ್ಪನವರು, ಮೆಡಲೇರಿ, ರಾಣೆಬೇನ್ನೂರು ತಾಲೂಕು ೧,೦೦೦

(೨೮) ಬೆಲ್ಲೂಡಿ ಮಲ್ಲಪ್ಪನವರ ಗುರುಸಿದ್ದಪ್ಪನವರು, ಕೊಂಡನಕೇರಿ, ದಾವಣಗೆರೆ ತಾಲೂಕು ೧,೦೦೫

(೨೯) ಪಟೇಲ್ ವಿರುಪಾಕ್ಷಪ್ಪ ಅಂಡ್ ಸನ್ಸ, ಅಲಗಿಲವಾಡ, ಬಳ್ಳಾರಿ ಡಿಸ್ಟ್ರಿಕ್ಟ್ ೧,೦೦೦

(೩೦) ಹಿರೇಹಳ್ಳಿ ಶಿವರುದ್ರಪ್ಪನವರ ರುದ್ರಪ್ಪನವರು, ಮಾಯಕೊಂಡ, ದಾವಣಗೆರೆ ತಾಲೂಕು ೧,೦೦೦

ಜುಮ್ಲಾ ೩೪,೦೩೦

ವಿ. ಸೂ:— ರಬಕವಿ ಮ|| ಮೂತ್ತೂರ ಬಸೆಟ್ಟಪ್ಪ ಎಂಬವರು ಚಂದಾ ರೂ. ೧,೦೦೦ ಗಳನ್ನು ದಾವಣಗೆರೆಯಲ್ಲಿರುವ ಮ|| ಟಿ. ಎಂ. ರಪ್ಪಯ್ಯನವರ ವಶಕ್ಕೆ ಕೊಟ್ಟು ಕಳುಹಿಸಿದ್ದಾರೆ. ಇದು ಈ ಮಹಾ ಸಹಾಯ ನಿಧಿಯು ಬಗ್ಗೆ ಸಂಯಾವ ಆಡಳಿತ ಕ್ರಮವು ಏರ್ಪಡುವವರೆಗೂ ಷಡಕ್ಷರಪ್ಪಯ್ಯನವರಲ್ಲಿ ಠೇವಣಾತಿಯಾಗಿ ಇರತಕ್ಕದ್ದೆಂದು ಗೊತ್ತಾಗಿದೆ.

